ಶ್ರೀ ರಾಘವೇಂದ್ರತೀರ್ಥ ಯತಿವಿರಚಿತ

# ತೈತ್ತಿರೀಯೋಪನಿಷತ್ ಖಂಡಾರ್ಥ

## ಬ್ರಹ್ಮವಲ್ಲೀ ಮತ್ತು ಭೃಗುವಲ್ಲೀ

(ದ್ವಿತೀಯ ಸಂಪುಟ)



ಅನುವಾದಕರು

ಮ॥ ಶಾ॥ ಸಂ॥ ಶ್ರೀ ಹರಿದಾಸ ಭಟ್ಟರು

ಪ್ರಾಂಶುಪಾಲರು

ಪೂರ್ಣಪ್ರಜ್ಞವಿದ್ಯಾಪೀಠ

॥ ಶ್ರೀ ಗುರುಭ್ಯೋನಮಃ ॥

# ತೈತ್ತಿರೀಯೋಪನಿಷತ್ ಖಂಡಾರ್ಥ

## ಬ್ರಹ್ಮವಲ್ಲೀ ಮತ್ತು ಭೃಗುವಲ್ಲೀ
## (ದ್ವಿತೀಯ ಸಂಪುಟ)


ಅನುವಾದಕರು

**ಮ॥ ಶಾ॥ ಸಂ॥ ಶ್ರೀ ಹರಿದಾಸ ಭಟ್ಟರು**

*ಪ್ರಾಂಶುಪಾಲರು*

*ಪೂರ್ಣಪ್ರಜ್ಞವಿದ್ಯಾಪೀಠ*



ಪ್ರಕಾಶಕರು

**ಶ್ರೀಗುರುರಾಜ ಅಸೋಸಿಯೇಷನ್ (ರಿ.)**

ಮಾಡಲ್‌ಹೌಸ್ ಬೀದಿ, ಬಸವನಗುಡಿ,

ಬೆಂಗಳೂರು-560 004.

ಗ್ರಂಥದ ಹೆಸರು : **ತೈತ್ತಿರೀಯೋಪನಿಷತ್ ಖಂಡಾರ್ಥ**

ವ್ಯಾಖ್ಯಾನಕಾರರು : ಶ್ರೀರಾಘವೇಂದ್ರತೀರ್ಥರು

ಅನುವಾದಕರು : ಮ|| ಶಾ|| ಸಂ|| ಶ್ರೀ ಹರಿದಾಸ ಭಟ್ಟರು

ಪ್ರಕಾಶಕರು : ಶ್ರೀಗುರುರಾಜ ಅಸೋಸಿಯೇಷನ್ (ರಿ.)
ಮಾಡಲ್‌ಹೌಸ್ ಬೀದಿ, ಬಸವನಗುಡಿ
ಬೆಂಗಳೂರು-560 004.

ಪುಟಗಳು : xii + 125

ಪ್ರತಿಗಳು : 1000

ಬೆಲೆ : ರೂ..5/-



ಮುದ್ರಕರು : **ವಾಗರ್ಥ**
ನಂ.149, 8ನೇ ಅಡ್ಡರಸ್ತೆ, ನ.ರಾ. ಕಾಲೋನಿ, ಬೆಂಗಳೂರು-19. ☎: 26527677

॥ ಶ್ರೀ ಗೋಪೀನಾಥೋ ವಿಜಯತೇ ॥

ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯತ್ವಾದ್ಯನೇಕಗುಣಸಂಪನ್ನ
ಪದವಾಕ್ಯ ಪ್ರಮಾಣ ಪಾರಾವಾರಪಾರೀಣ ಸರ್ವತಂತ್ರ
ಸ್ವತಂತ್ರ ಶ್ರೀಮದ್ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ
ಜಗದ್ಗುರು ಶ್ರೀಮನ್ ಮಧ್ವಾಚಾರ್ಯ ಮೂಲ ಮಹಾಸಂಸ್ಥಾನ
ಶ್ರೀ ಪದ್ಮನಾಭತೀರ್ಥ ಪರಂಪರಾ ಶ್ರೀಹಯವದನ ರಂಗವಿಠ್ಠಲಾತ್ಮಕ
ಶ್ರೀ ಗೋಪೀನಾಥ ದೇವರ ದಿವ್ಯ ಶ್ರೀಪಾದಪದ್ಮಾರಾಧಕರಾದ
ಶ್ರೀ ಶ್ರೀಪಾದರಾಜವರವಿದ್ಯಾಸಿಂಹಾಸನಾಧೀಶರಾದ
ಶ್ರೀ ೧೦೮ ಶ್ರೀ ಸತ್ಯನಿಧಿತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಶ್ರೀ ೧೦೮ ಶ್ರೀ ವಿಜಯನಿಧಿತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ

## ಶ್ರೀ ೧೦೮ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು

# ಅನುಗ್ರಹ ಸಂದೇಶ

ದಶೋಪನಿಷತ್ತುಗಳಲ್ಲೊಂದಾದ ತೈತ್ತಿರೀಯ ಉಪನಿಷತ್ ಗ್ರಂಥಕ್ಕೆ ಭಾಷ್ಯ ಹಾಗೂ ಟೀಕಾ ಗ್ರಂಥಗಳು ಮತ್ತು ಮಂತ್ರಾಲಯ ಪ್ರಭುಗಳ ಖಂಡಾರ್ಥ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿದ್ದು-ಸಂಸ್ಕೃತ ಪರಿಚಯವಿಲ್ಲದ ಅನೇಕ ಯೋಗ್ಯ ಜೀವರುಗಳ ಉಪಯೋಗಕ್ಕಾಗಿ - ಮೇಲ್ಕಂಡ ಶ್ರೀ ಗುರುರಾಜಾ ಅಸೋಸಿಯೇಷನ್(ರಿ.) ಮುಂದೆ ಬಂದು - ಪೂರ್ಣಪ್ರಜ್ಞಾ ವಿದ್ಯಾಪೀಠದ ಪ್ರಾಂಶುಪಾಲರಾದ ಮ॥ ಶಾ॥ ಸಂ॥ ಶ್ರೀ ಹರಿದಾಸ ಭಟ್ಟರಿಂದ ಕನ್ನಡಾನುವಾದದೊಂದಿಗೆ ತೈತ್ತಿರೀಯ ಉಪನಿಷತ್ತಿನ **ಬ್ರಹ್ಮವಲ್ಲೀ ಮತ್ತು ಭೃಗುವಲ್ಲೀ** (ದ್ವಿತೀಯ) ಪುಸ್ತಕವನ್ನು ಅಚ್ಚುಮಾಡಿಸಿ ಬಿಡುಗಡೆ ಮಾಡುತ್ತಿರುವುದು ಶ್ಲಾಘನೀಯ.

ಹರಿದಾಸ ಭಟ್ಟರು ತಮ್ಮ ಈ ಕನ್ನಡ ಅನುವಾದದ ಶೈಲಿಯು ಬಹಳ ಸರಳ ಹಾಗೂ ಅರ್ಥ ಗರ್ಭಿತವಾಗಿ ಸಾಮಾನ್ಯರಿಗೂ ಮನಮುಟ್ಟುವಂತೆ ಮಂತ್ರಾಲಯ ಪ್ರಭುಗಳ ಖಂಡಾರ್ಥವನ್ನು ಸೂಕ್ತ ರೀತಿಯಲ್ಲಿ ಕನ್ನಡೀಕರಿಸಿರುವುದಲ್ಲದೆ ಕೆಲವೊಂದು ಪ್ರಸಂಗಗಳಲ್ಲಿ ಖಂಡಾರ್ಥದ ಖಂಡವನ್ನು ಖಂಡರಿಗೆ ಅಪೂರ್ವವಾದ ಅರ್ಥಗಳನ್ನು ಪುಷ್ಟೀಕರಿಸುವ ಶ್ರೀಮದ್ವಾದಿರಾಜರ

ಅರ್ಥಗಳನ್ನೂ ಸಹ ಆಧರಿಸಿ ಬರೆದು ಮಹದುಪಕಾರವನ್ನು ಮಾಡಿ ''ಉಪನಿಷತ್'' ಎಂಬ ಪದದ ಸಾರ್ಥಕ್ಯ ಪಡಿಸಿರುತ್ತಾರೆ. ಸಾಧಕರು ಈ ಗ್ರಂಥಾವಲೋಕನೆಯಿಂದ ಜ್ಞಾನವೃದ್ಧಿ ಮಾಡಿಕೊಂಡು ಭಗವಂತನ ಕೃಪೆಗೆ ಪಾತ್ರರಾಗಲೆಂದು ಅಪೇಕ್ಷಿಸುತ್ತಾ- ಇಂತಹ ಇನ್ನೂ ಅನೇಕಾನೇಕ ಗ್ರಂಥಗಳು ಶ್ರೀ ಗುರುರಾಜ ಅಸೋಸಿಯೇಷ್ಸರವರಿಂದ ಹೊರಬರಲೆಂದು ನಮ್ಮ ಆರಾಧ್ಯಮೂರ್ತಿ ಶ್ರೀ ಶ್ರೀ ಹಯವದನ ರಂಗವಿಠಲಾತ್ಮಕ ಶ್ರೀ ಶ್ರೀ ಗೋಪೀನಾಥ ದೇವರಲ್ಲಿ ಪ್ರಾರ್ಥಿಸುತ್ತಾ ಮಾಡುವ ನಾರಾಯಣ ಸ್ಮರಣೆಗಳು.

ಬೆಂಗಳೂರು
೨೧-೮-೨೦೦೪

॥ ಶ್ರೀ ಗುರುರಾಜಾ ವಿಜಯತೇ ॥

# ಪ್ರಕಾಶಕರ ನುಡಿ

ಮನುಷ್ಯ ಜನ್ಮ ಬಂದಾಗ ಯಾವುದನ್ನು ಸಂಪಾದನೆ ಮಾಡಬೇಕೋ ಅಂತಹ ಪರಾಪರತತ್ವ ಜ್ಞಾನವನ್ನೇ ಕೊಡತಕ್ಕ ತೈತ್ತಿರೀಯ ಉಪನಿಷತ್ ಖಂಡಾರ್ಥ ಕನ್ನಡ ಅನುವಾದ ಸಹಿತ ಪ್ರಕಟಿಸಲು ಸಂತೋಷಿಸುತ್ತೇವೆ.

ಮಂತ್ರಾಲಯ ಪ್ರಭುಗಳು ಮಾಡಿಕೊಟ್ಟಿರುವ ಉಪಕಾರ ವರ್ಣನಾತೀತ. ಮಧ್ವಶಾಸ್ತ್ರ ಸಂಪನ್ನರಾದ ಪಂಡಿತ ವರೇಣ್ಯರುಗಳಾದ ಶ್ರೀ ಡಿ. ಪ್ರಹ್ಲಾದಾಚಾರ್ಯರು, ಶ್ರೀ ಹರಿದಾಸಭಟ್ಟರು, ಶ್ರೀ ನಾಗಸಂಪಿಗೆಯವರು, ಶ್ರೀ ರಾಮ ವಿಠಲರು, ಹಾಗೂ ಶ್ರೀ ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರ ಸಹಾಯದಿಂದ ನಮ್ಮ ಶ್ರೀ ಗುರುರಾಜಾ ಅಸೋಸಿಯೇಷನ್ ಸಂಸ್ಥೆಯ ವತಿಯಿಂದ ಮಧ್ವಶಾಸ್ತ್ರ ಗ್ರಂಥಗಳನ್ನು ಕನ್ನಡೀಕರಿಸಿ ಪ್ರಕಟಪಡಿಸಲ್ಪಟ್ಟಿದೆ.

ಸಮಸ್ತ ಮಾಧ್ವ ಬಂಧುಗಳು ಇದರ ಉಪಯೋಗವನ್ನು ಪಡೆದು-ಕೊಳ್ಳಬೇಕೆಂದು ಕೋರುತ್ತೇವೆ.

ಈ ಗ್ರಂಥ ಪ್ರಕಟಣೆಗೆ ಸಹಕರಿಸಿದ ಸಕಲರಿಗೂ ಹಾಗೂ ನಮ್ಮ ಪ್ರಾರ್ಥನೆಗೆ ಮನ್ನಿಸಿ ಸರಳವಾಗಿ ಕನ್ನಡ ಅನುವಾದ ಮಾಡಿಕೊಟ್ಟ ಪೂರ್ಣಪ್ರಜ್ಞ ವಿದ್ಯಾಪೀಠ ಪ್ರಾಂಶುಪಾಲರಾದ ಶ್ರೀ ಹರಿದಾಸ ಭಟ್ಟರಿಗೂ, ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥಕ್ಕೆ ಅನುಗ್ರಹ ಸಂದೇಶ ನೀಡಿದ ಶ್ರೀ ಶ್ರೀಪಾದರಾಜ ಮಠಾಧೀಶರಾದ ಪರಮ ಪೂಜ್ಯ ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳ-ವರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತೇವೆ.

ಗ್ರಂಥ ಪ್ರಕಟಣೆಗೆ ಆರ್ಥಿಕ ನೆರವು ನೀಡಿದ ಶ್ರೀ ಚೈತ್ರ ರಾಘವೇಂದ್ರ ರಾವ್ ಮತ್ತು ಕುಟುಂಬದವರಿಗೆ ಮಂತ್ರಾಲಯ ಪ್ರಭುಗಳ ಅನುಗ್ರಹವಾಗಲಿ ಎಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥ ಪ್ರಕಟಣೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದವರಿಗೆ ಶ್ರೀ ಗುರುರಾಜರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. ಈ ಮುದ್ರಣದ ಕಾರ್ಯವನ್ನು ಸುಂದರವಾಗಿ ಅಲ್ಪಕಾಲದಲ್ಲಿ ಸಮರ್ಪಕವಾಗಿ ಮಾಡಿಕೊಟ್ಟ ಮೆ|| ವಾಗರ್ಥ, ಬೆಂಗಳೂರು ಇವರಿಗೆ ಅಭಿನಂದನೆಗಳನ್ನು ಸಮರ್ಪಿಸುತ್ತಾ, ಶ್ರೀ ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀಮನ್ಮೂಲರಾಮಚಂದ್ರದೇವರಲ್ಲಿ ತೈತ್ತಿರೀಯ ಖಂಡಾರ್ಥದ ಬ್ರಹ್ಮವಲ್ಲೀ ಮತ್ತು ಭೃಗುವಲ್ಲೀ (ದ್ವಿತೀಯ) ಈ ಗ್ರಂಥಪುಷ್ಪವನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದೇವೆ.

೨೧. ೦೮. ೨೦೦೪
ಬೆಂಗಳೂರು

ಅಧ್ಯಕ್ಷರು, ಹಾಗೂ ಆಡಳಿತ ಮಂಡಲಿ ಸದಸ್ಯರು
ಶ್ರೀ ಗುರುರಾಜಾ ಅಸೋಸಿಯೇಷನ್ (ರಿ.)
ಬಸವನಗುಡಿ, ಬೆಂಗಳೂರು.

# ಅಧ್ಯಯನಕ್ಕೆ ಮುನ್ನ

ತೈತ್ತಿರೀಯ ಉಪನಿಷತ್ತಿನ ಮೊದಲನೆಯ ಶಿಕ್ಷಾವಲ್ಲೀ ಈಗಾಗಲೇ ಅನುವಾದಗೊಂಡು ಜಿಜ್ಞಾಸುಗಳ ಕೈಸೇರಿದೆ. ಈ ಪುಸ್ತಕದಲ್ಲಿ ಎರಡನೆಯ ಬ್ರಹ್ಮವಲ್ಲೀ ಮತ್ತು ಮೂರನೆಯ ಭೃಗುವಲ್ಲೀ ಇವೆರಡನ್ನೂ ಕನ್ನಡೀಕರಿಸಿ ಮುದ್ರಿಸಲಾಗಿದೆ.

ಬ್ರಹ್ಮವಲ್ಲೀ ಈ ಉಪನಿಷತ್ತಿನ ಪ್ರಮುಖವಾದ ಭಾಗ. ಬ್ರಹ್ಮಸೂತ್ರದ ಪ್ರಥಮಾಧ್ಯಾಯದ ಸಮನ್ವಯ ಸೂತ್ರ ಆರಂಭಗೊಳ್ಳುವುದೇ ಈ ವಲ್ಲಿಯಿಂದ. ಇಲ್ಲಿ ಬರುವ ಆನಂದಮಯ ಶಬ್ದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲು ''ಆನಂದಮಯೋಽಭ್ಯಾಸಾತ್'' ಎಂಬ ಸೂತ್ರ ಹೊರಟಿದೆ. ಎಂಟು ಸೂತ್ರಗಳನ್ನು ಒಳಗೊಂಡ ಈ ಅಧಿಕರಣ ಸಮಗ್ರವಾಗಿ ಈ ವಲ್ಲಿಯ ವಿಮರ್ಶೆಯನ್ನು ನಡೆಸುತ್ತದೆ.

ಒಟ್ಟು ಎಂಟು ಪ್ರಕರಣಗಳನ್ನಾಗಿ ಈ ಬ್ರಹ್ಮವಲ್ಲಿಯನ್ನು ವಿಭಾಗಿಸ-ಬಹುದಾಗಿದೆ. ಮೊದಲ ಭಾಗವು ಬ್ರಹ್ಮನ ಲಕ್ಷಣವನ್ನು ಹೇಳುತ್ತದೆ. ಎರಡನೆಯ ಭಾಗ ಜಗತ್ತಿನ ಸೃಷ್ಟಿಯನ್ನು ಸಂಕ್ಷೇಪವಾಗಿ ತಿಳಿಸುತ್ತದೆ. ಮುಂದಿನ ಐದು ಪ್ರಕರಣ-ಗಳು ನಮ್ಮ ದೇಹಕ್ಕೆ ಸಂಬಂಧಿಸಿದ ಐದು ಕೋಶಗಳ ವಿವರವನ್ನು ನೀಡುತ್ತದೆ. ಕೊನೆಯ ಪ್ರಕರಣ ಮೋಕ್ಷದಲ್ಲಿರುವ ಆನಂದ ತಾರತಮ್ಯವನ್ನು ತಿಳಿಸುತ್ತದೆ.

ಹೀಗೆ ಒಟ್ಟು ಎಂಟು ಪ್ರಕರಣಗಳಲ್ಲಿ ಆರು ಪ್ರಕರಣಗಳು ಪ್ರಾರಂಭದಲ್ಲಿ ಹೇಳಿರುವ ಬ್ರಹ್ಮನ ಲಕ್ಷಣಗಳನ್ನು ವಿವರಿಸುತ್ತವೆ. ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂದು ಬ್ರಹ್ಮನಿಗೆ ಮೂರು ಲಕ್ಷಣಗಳನ್ನು ಪ್ರಾರಂಭದಲ್ಲಿ ಉಪನಿಷತ್ತು ಹೇಳಿದೆ. ಇವುಗಳಲ್ಲಿ ಸತ್ಯಪದಕ್ಕೆ ನಾಲ್ಕು ಅರ್ಥಗಳಿವೆ. ಜಗತ್ತಿನ ಸೃಷ್ಟಿಕರ್ತಾ, ಸ್ಥಿತಿಕರ್ತಾ, ಸಂಹಾರಕರ್ತಾ, ಕ್ರಿಯಾಶಕ್ತಿ ಪ್ರದ ಎಂದು ಸತ್ಯಪದದ ಅರ್ಥಗಳು. ಮೊದಲ ಅರ್ಥವನ್ನು ''ಆತ್ಮನಃ ಆಕಾಶಃ ಸಂಭೂತಃ'' ಎನ್ನುವ ಸೃಷ್ಟಿ ಪ್ರಕರಣವು ಬ್ರಹ್ಮನಲ್ಲಿ ಸಮನ್ವಯ ಮಾಡುತ್ತದೆ. ಎರಡು ಮತ್ತು ಮೂರನೆಯ ಅರ್ಥವನ್ನು ಅನ್ನಮಯ ಪ್ರಕರಣದಲ್ಲಿ ಸಮನ್ವಯ ಮಾಡಲಾಗಿದೆ. ನಾಲ್ಕನೆಯ ಅರ್ಥವನ್ನು ಪ್ರಾಣಮಯ ಪ್ರಕರಣವು ತಿಳಿಸಿಕೊಡುತ್ತದೆ. ಜ್ಞಾನ ಪದಕ್ಕೂ ಎರಡು ಅರ್ಥವಿದೆ. ಜಗತ್ತಿನ ಎಲ್ಲ

ವಸ್ತುಗಳಲ್ಲಿರುವ ಸಾಮಾನ್ಯಧರ್ಮವನ್ನು ತಿಳಿದವನು ಎಂದು ಒಂದು ಅರ್ಥವಾದರೆ ಎಲ್ಲ ವಸ್ತುಗಳನ್ನೂ ವ್ಯಕ್ತಿಶಃ ತಿಳಿದವನು ಎಂದು ಮತ್ತೊಂದು ಅರ್ಥ. ಪರಮಾತ್ಮನಿಗೆ ಮನುಷ್ಯ, ಪಶು, ಪಕ್ಷಿ, ಮೃಗ, ಮರ, ಗಿಡಗಳಲ್ಲಿರುವ ಎಲ್ಲಾ ಜಾತಿಗಳ ಪರಿಚಯವೂ ಇದೆ. ಅಂದರೆ ಅವುಗಳ ಪ್ರಭೇಧಗಳನ್ನೆಲ್ಲ ಅವನು ತಿಳಿದಿದ್ದಾನೆ. ಇದು ಅವನಿಗಿರುವ ಸಾಮಾನ್ಯತಃ ಸರ್ವಜ್ಞತ್ವ. ಇಷ್ಟೇ ಅಲ್ಲದೆ ಒಂದೊಂದು ವಸ್ತುಗಳ ಬಣ್ಣ, ಗಾತ್ರ, ಅವುಗಳ ಭವಿಷ್ಯ ಇವೆಲ್ಲವೂ ಪರಮಾತ್ಮನಿಗೆ ತಿಳಿದಿದೆ. ಇದು ವಿಶೇಷತಃ ಸರ್ವಜ್ಞತ್ವ. ಇವೆರಡನ್ನು ಮನೋಮಯ. ವಿಜ್ಞಾನಮಯ ಪ್ರಕರಣಗಳಲ್ಲಿ ಸಮನ್ವಯ ಮಾಡಲಾಗಿದೆ. ಕೊನೆಯ ಆನಂದಮಯ ಪ್ರಕರಣದಲ್ಲಿ ಹಿಂದಿನ ಪ್ರಕರಣಗಳಂತೆ 'ಅನಂತಂ' ಎಂಬ ಪದವು ಹೇಳಿದ ಲಕ್ಷಣವನ್ನು ಸಮನ್ವಯ ಮಾಡುವ ಬದಲು ಅನಂತತ್ವವನ್ನು ಸಮರ್ಥಿಸುವ ಆನಂದ ಪೂರ್ಣತ್ವವನ್ನು ಬ್ರಹ್ಮನಿಗೆ ಪ್ರತಿಪಾದಿಸಲಾಗಿದೆ. ಅನಂತ ಎಂದರೆ ಗುಣಗಳ ಮಿತಿ ಇಲ್ಲದವ. ಅಪರಿಮಿತ ಗುಣಾಕರ. ಬ್ರಹ್ಮನು ಈ ಅದ್ಭುತ ಜಗತ್ತಿಗೆ ನಿರ್ಮಾತೃವಾದುದರಿಂದ ಅವನು ಅಗಣಿತ ಗುಣನಿಧಿ ಎಂದು ತಿಳಿಯಬಹುದು. ಅವನು ಈ ಜಗತ್ತನ್ನು ಸೃಷ್ಟಿ ಮಾಡಲು ಕಾರಣ, ತುಂಬಿದ ಆನಂದ. ಚೇತನನು ಯಾವುದೇ ಕ್ರಿಯೆಯಲ್ಲಿ ತೊಡಗಬೇಕಾದರೆ ರಾಗ, ದ್ವೇಷ, ತಡೆಯಲಾರದ ದುಃಖ, ತುಂಬಿತುಳುಕುವ ಆನಂದ ಇವುಗಳು ಕಾರಣ. ರಾಗದಿಂದ ಮಾಡಬೇಕಾದುದನ್ನು ಮಾಡಬಾರದ್ದನ್ನು ಮಾಡುತ್ತಾನೆ. ದ್ವೇಷದಿಂದಲೂ ಮತ್ತೊಬ್ಬರಿಗೆ ಕೆಡುಕು ಮಾಡುತ್ತಾನೆ. ತಡೆಯಲಾರದ ದುಃಖದಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಅನಿರೀಕ್ಷಿತವಾಗಿ ಸುಖ ಬಂದಾಗ ಯಾವ ಪ್ರತಿಫಲದ ಯೋಚನೆಯೂ ಇಲ್ಲದೆ ಹಾಡುವುದು, ಕುಣಿಯುವುದು ಮುಂತಾದ ಕ್ರಿಯೆಗಳನ್ನು ನಡೆಸುತ್ತಾನೆ. ಬ್ರಹ್ಮನಲ್ಲಿ ದೋಷಗಳು ಇಲ್ಲದಿರುವ ಕಾರಣ ಮೊದಲ ಮೂರು ಕಾರಣಗಳಿಂದ ಅವನು ಸೃಷ್ಟಿಕ್ರಿಯೆಯಲ್ಲಿ ತೊಡಗುವುದಿಲ್ಲ. ಹೀಗಾಗಿ ಆನಂದೋದ್ರೇಕದಿಂದಲೇ ಅವನು ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎನ್ನಬೇಕು. ಆದ್ದರಿಂದ ಅನಂತಗುಣಗಳಿಗೆ ಕಾರಣವಾದ ಸೃಷ್ಟಿಕ್ರಿಯೆಯನ್ನು ಸಮರ್ಥಿಸುವ ಸಲುವಾಗಿ ಆನಂದಮಯ ಪ್ರಕರಣದಲ್ಲಿ ಬ್ರಹ್ಮನಿಗೆ ಆನಂದ ಪೂರ್ಣತ್ವವನ್ನು ಸಮರ್ಥಿಸಲಾಗಿದೆ. ಹೀಗೆ ಈ ಆರೂ ಪ್ರಕರಣಗಳೂ ಮೊದಲ ಲಕ್ಷಣವಾಕ್ಯಕ್ಕೆ ಸಂಬಂಧಿಸಿವೆ. ಮಾತ್ರವಲ್ಲ, ಅನ್ನಮಯ,

ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ನಮ್ಮ ದೇಹದಲ್ಲಿರುವ ಈ ಐದು ಕವಚಗಳಲ್ಲಿರುವ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಈ ರೂಪಗಳನ್ನು ಪ್ರತಿಪಾದಿಸುತ್ತಿವೆ. ಮಹಾತ್ಮರ ಆರಾಧನೆಯ ಸಂದರ್ಭಗಳಲ್ಲಿ ಅಲಂಕಾರ ಪಂಕ್ತಿಯಲ್ಲಿ ಐದು ಮಂದಿ ಬ್ರಾಹ್ಮಣರ ಆರಾಧನೆಯನ್ನು ನಡೆಸಲು ಇದೇ ಹಿನ್ನೆಲೆಯಾಗಿದೆ. ಈ ಐದು ಭಗವದ್ರೂಪಗಳೊಂದಿಗೆ ಚಕ್ಷುರ್ಮಯ, ಶ್ರೋತ್ರಮಯ, ವಾಙ್ಮಯ ರೂಪಗಳನ್ನೂ ಭೃಗುವಲ್ಲಿಯಲ್ಲಿ ಹೇಳಿರುವ ಕಾರಣ ಅವುಗಳನ್ನೂ ಸೇರಿಸಿಕೊಂಡಾಗ ಒಟ್ಟು ಎಂಟು ರೂಪಗಳು ನಮ್ಮ ದೇಹದಲ್ಲಿ ಸನ್ನಿಹಿತವಾಗಿವೆ. ಈ ರೂಪಗಳ ಜ್ಞಾನ, ಉಪಾಸನೆಗಳಿಗೆ ಬ್ರಹ್ಮದೇವರು ಮುಖ್ಯಾಧಿಕಾರಿಗಳು.

ಅನ್ನಮಯಾದಿ ಐದು ಪ್ರಕರಣಗಳಲ್ಲಿ ಈ ಐದು ರೂಪಗಳ ತಲೆ, ಎರಡು ಕೈಗಳು, ಮಧ್ಯದೇಹ, ಎರಡು ಕಾಲುಗಳು ಇವುಗಳ ವಿವರವನ್ನು ನೀಡಲಾಗಿದೆ. ಇವುಗಳಲ್ಲಿ ಅನ್ನಮಯ ಪ್ರಕರಣವು ''ಸ ವಾ ಏಷ ಪುರುಷಃ ಅನ್ನರಸಮಯಃ'' ಎಂದು ಆರಂಭಗೊಳ್ಳುತ್ತದೆ. ''ಸಃ ಪುರುಷಃ'' ಎಂದರೆ ಹಿಂದೆ ಪ್ರಸ್ತುತನಾದ ಪುರುಷ. ಈ ಪ್ರಕರಣಕ್ಕಿಂತ ಹಿಂದೆ 'ಅನ್ನಾತ್ ಪುರುಷಃ' ಎಂದು ಈ ಜಡವಾದ ದೇಹವೇ ಪ್ರಸ್ತುತವಾಗಿದೆ. ಹೀಗಾಗಿ ಈ ಅನ್ನಮಯ ಪ್ರಕರಣ ಜಡದೇಹದ ವಿವರವನ್ನೇ ನೀಡುವಂತೆ ತೋರುತ್ತದೆ. ಅಷ್ಟೇ ಅಲ್ಲದೆ, ಅನ್ನಮಯದ ಅವಯವಗಳನ್ನು ಉಪನಿಷತ್ತು 'ತಸ್ಯ ಇದಮೇವ ಶಿರಃ' ಎಂದು ನಿರೂಪಿಸಿದೆ. ನಾವೆಲ್ಲ ನೋಡುವ ತಲೆಯೇ ಅನ್ನಮಯನ ತಲೆ ಎಂದು ಅರ್ಥ. ಇದರಿಂದ ಅನ್ನಮಯವೆಂದರೆ ಈ ಜಡದೇಹ ಎಂದು ಸ್ಫುಟವಾಗುತ್ತದೆ. ಆದರೂ ಈ ಪ್ರಕರಣವನ್ನು ಬ್ರಹ್ಮಪರವಾಗಿ ಆಚಾರ್ಯರು ವ್ಯಾಖ್ಯಾನಿಸಿದ್ದಾರೆ. ಭಗವಾನ್ ವೇದವ್ಯಾಸರು ''ಮಾಂತ್ರವರ್ಣಿಕಮೇವ ಚ ಗೀಯತೇ'' ಎಂದು ಆದೇಶಿಸಿದ್ದಾರೆ. ಈ ಐದೂ ಪ್ರಕರಣಗಳಲ್ಲಿ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ ಎಂದು ಆ ಸೂತ್ರದ ಅಭಿಪ್ರಾಯ. ಅವರ ಆದೇಶದಂತೆ ಆಚಾರ್ಯರು ಅನ್ನಮಯಾದಿ ಐದೂ ಬ್ರಹ್ಮನ ರೂಪಗಳು ಎಂದು ಸಮರ್ಥಿಸಿದ್ದಾರೆ. ಶಾಂಕರ ಸಿದ್ಧಾಂತದಲ್ಲಿ ಈ ಐದೂ ಆತ್ಮನ ಕವಚಗಳು. ರಾಮಾನುಜ ಸಿದ್ಧಾಂತದಂತೆ ಇವುಗಳಲ್ಲಿ ನಾಲ್ಕು ಕೋಶಗಳು, ಕೊನೆಯದಾದ ಆನಂದಮಯ ಮಾತ್ರ ಬ್ರಹ್ಮ. ಮಾಧ್ವದರ್ಶನದಲ್ಲಿ ಐದೂ ಬ್ರಹ್ಮ ರೂಪಗಳು.

ಈ ಉಪನಿಷತ್ತು ಜೀವಬ್ರಹ್ಮಭೇದವನ್ನು ಸಮರ್ಥಿಸಿ, ಅಭೇದವನ್ನು ನಿರಾಕರಿಸಿರುವುದು ಒಂದು ವಿಶೇಷಾಂಶ.

**ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ ।**
**ಅಸ್ತಿ ಬ್ರಹ್ಮೇತಿ ಚೇದ್ವೇದ ಸಂತಮೇನಂ ತತೋ ವಿದುರಿತಿ ॥**

ಜೀವನಿಗಿಂತ ಭಿನ್ನನಾದ ಬ್ರಹ್ಮತತ್ತ್ವವನ್ನು ನಿರಾಕರಿಸುವವನು ಅಸಜ್ಜನ. ಜೀವಭಿನ್ನನಾದ ಬ್ರಹ್ಮವಾದವನ್ನು ಸಮರ್ಥಿಸುವವನು ಸಜ್ಜನ, ಎಂದು ಈ ಮಂತ್ರದ ಅರ್ಥ.

ಅಲ್ಲದೆ, ಬ್ರಹ್ಮನು ಆನಂದರೂಪನೆಂದು ಕಂಡುಕೊಳ್ಳುವ ಜ್ಞಾನಿಯು ಅದುವರೆಗೆ ಸಂಪಾದಿಸಿದ ಪುಣ್ಯವು ಅವನ ಮಿತ್ರರಿಗೂ ಪಾಪ ಶತ್ರುಗಳಿಗೂ ಸೇರುತ್ತದೆ ಎಂದಿದೆ ಈ ಉಪನಿಷತ್ತಿನಲ್ಲಿ-

**''ಉಭೇ ಹ್ಯೇವೈಷ ಏತೇ ಆತ್ಮಾ ನಂ ಸ್ಪೃಣುತೇ''**

ಶ್ರೀ ರಾಘವೇಂದ್ರ ಸ್ವಾಮಿಗಳು ತಮ್ಮ ಪುಣ್ಯಫಲವನ್ನು ಭಕ್ತರ ಅನುಗ್ರಹಕ್ಕಾಗಿ ಉಪಯೋಗಿಸುತ್ತಿರುವುದು ಇದಕ್ಕೊಂದು ನಿದರ್ಶನವೆನ್ನಬಹುದು.

ಹೀಗೆ ಉಪನಿಷತ್ತಿನ ಈ ಎರಡನೆಯ ಭಾಗವು ಬ್ರಹ್ಮನ ಸ್ವರೂಪದ ಬಗ್ಗೆ ವಿವರಗಳನ್ನು ನೀಡುತ್ತಿರುವುದರಿಂದ ಇದಕ್ಕೆ ಬ್ರಹ್ಮವಲ್ಲೀ ಎಂಬ ಹೆಸರು ಸಾರ್ಥಕವಾಗಿದೆ. ಮುಂದಿನ ಭಾಗವು ಇದಕ್ಕೆ ಪೂರಕವಾಗಿದೆ. ಅದು ವರುಣ ಮತ್ತು ಅವನ ಮಗನಾದ ಭೃಗು ಇವರಿಬ್ಬರ ಸಂವಾದ ರೂಪವಾಗಿ ಬಂದಿದೆ. ತಂದೆಯ ಬಳಿಗೆ ಮಗ ಬಂದು ಬ್ರಹ್ಮೋಪದೇಶವನ್ನು ಪಡೆದು ಅನ್ನಮಯಾದಿ ಎಂಟು ರೂಪಗಳನ್ನೂ ಸಾಕ್ಷಾತ್ಕರಿಸಿಕೊಂಡ ಇತಿಹಾಸ ಇದು. ಗುರೂಪಸತ್ತಿ, ಶ್ರವಣ, ಮನನಾದಿಗಳನ್ನು ಮತ್ತೆ ಮತ್ತೆ ಮಾಡುತ್ತಿರಬೇಕು, ಎನ್ನುವುದಕ್ಕೆ ಈ ತಂದೆ-ಮಕ್ಕಳ ಸಂವಾದವೇ ನಿದರ್ಶನ. ಬ್ರಹ್ಮಸೂತ್ರದ ನಾಲ್ಕನೆಯ ಅಧ್ಯಾಯದ ಪ್ರಾರಂಭದ ಅಧಿಕರಣವು (ಆವೃತ್ತಿಃ ಅಸಕೃತ್ ಉಪದೇಶಾತ್) ಈ ಇತಿಹಾಸವನ್ನು ಉಲ್ಲೇಖಿಸಿ ಶ್ರವಣಾದಿಗಳನ್ನು ಮತ್ತೆ ಮತ್ತೆ ಮಾಡಬೇಕೆಂದು ವಿಧಿಸಿದೆ.

ಈ ವಲ್ಲಿ ಕೊಡುವ ಸಂದೇಶ 'ಅನ್ನಂ ನ ನಿಂದ್ಯಾತ್ = ಪರಮಾತ್ಮನನ್ನು ಎಂದೂ ಹೀಗಳೆಯಬೇಡ'' ''ಅನ್ನಂ ಬಹುಕುರ್ವೀತ = ಪರಮಾತ್ಮನು ಅನಂತಗುಣಾಕರ ಎಂದು ತಿಳಿ''. ಇದನ್ನು ಜೀವನದ ವ್ರತವನ್ನಾಗಿ ಸಾಧಕನು ಆಚರಿಸಬೇಕು 'ತದ್ ವ್ರತಂ' ಎಂದು ಉಪನಿಷತ್ತಿನ ಆದೇಶ. ಅದರೊಂದಿಗೆ ಅಧ್ಯಾತ್ಮ ವಿದ್ಯೆಯನ್ನು ಬಯಸಿ ಬಂದ ಯಾರನ್ನೂ ನಿರಾಕರಿಸಿ ಹಿಂದೆ ಕಳುಹಿಸಬಾರದು 'ನ ಕಂಚನ ವಸತೌ ಪ್ರತ್ಯಾಚಕ್ಷೀತ' ಎಂದು ಗೃಹಸ್ಥನಿಗೆ ಕಿವಿ ಮಾತನ್ನು ಹೇಳಿದೆ.

ಬಾಲ್ಯದಿಂದಾರಂಭಿಸಿ ದೇವರನ್ನು ಕಾಣಲು ಯತ್ನಿಸುವ ಅರ್ಹಸಾಧಕನಿಗೆ ಮಾತ್ರ ಪರಮಾತ್ಮನು ಸರ್ವಾಂಗಪೂರ್ಣವಾಗಿ ದರ್ಶನ ನೀಡುತ್ತಾನೆ. ಮಧ್ಯಮ ವಯಸ್ಸಿನಲ್ಲಿ ಸಾಧನೆ ಆರಂಭ ಮಾಡಿದರೆ ದೇವರ ಮಧ್ಯ ಭಾಗವಷ್ಟೇ ಸ್ಪಷ್ಟವಾಗಿ ಕಂಡು ಉಳಿದ ಭಾಗ ತೇಜಃ ಪುಂಜವಾಗಿ ಕಾಣುತ್ತದೆ. ಇಳಿವಯಸ್ಸಿನಲ್ಲಿ ಸಾಧನೆಗೆ ಇಳಿದರೆ ಪರಮಾತ್ಮನ ಪಾದಗಳನ್ನು ಮಾತ್ರ ಕಾಣುವ ಸುಯೋಗ. ಇವು ಈ ಉಪನಿಷತ್ತಿನ ಕೆಲವು ಸಂದೇಶಗಳು.

ರಾಯರ ಖಂಡಾರ್ಥ ಸರಳವಾದುದು; ಸರ್ವಸಂಗ್ರಾಹಕವಾದುದು. ಆಚಾರ್ಯರು ಮಾಡಿರುವ ಅರ್ಥವನ್ನೇ ಸಂಗ್ರಹಿಸಿ ಬ್ರಹ್ಮಸೂತ್ರಗಳ ಆಧಾರವನ್ನು ಅಲ್ಲಲ್ಲಿ ಕೊಟ್ಟು ಅವರು ಉಪನಿಷತ್ತಿನ ಪದ-ಪದಗಳ ಅರ್ಥವನ್ನು ಹೇಳಿದ್ದಾರೆ. ರಾಯರ ಕರುಣೆಗೆ ಇಲ್ಲೊಂದು ನಿದರ್ಶನವಿದೆ.

ಭೃಗುವಲ್ಲಿಯ ೯ನೆಯ ಮಂತ್ರದಲ್ಲಿ, ಪರಮಾತ್ಮನು ಚತುರ್ಮುಖನಿಗೂ ಹಂತಕ ಎಂದು ತಿಳಿದರೆ ಶತ್ರುನಾಶವಾಗುತ್ತದೆ ಎಂದು ಹೇಳಿ- ''ಪರಿಯೇ ಅಪ್ರಿಯಾ ಭ್ರಾತೃವ್ಯಾಃ'' ಎಂದಿದೆ. ಇದಕ್ಕೆ ತೋರುವ ಅರ್ಥ - ಜ್ಞಾನಿಗೆ ಅಪ್ರಿಯರಾದ ಸೋದರರು ನಾಶವಾಗುತ್ತಾರೆ ಎಂದು. ಆದರೆ, ರಾಯರು ಮಾಡಿರುವ ಅರ್ಥ - ''ಭ್ರಾತೃವ್ಯಾಃ = ದೇಹಸ್ಥಿತ ಶತ್ರವಃ ಕಾಮಕ್ರೋಧಾದ್ಯಾಃ ತೇಽಪಿ ಮ್ರಿಯಂತೆ''. ದೇಹದಲ್ಲಿರುವ ಕಾಮಾದಿ ಶತ್ರುಗಳು ನಾಶವಾಗುತ್ತವೆ ಎಂದು.

ಈ ಉಪನಿಷತ್ತಿನಲ್ಲಿ ಹೇಳಿರುವ ಉಪಾಸನೆಗೆ ಚತುರ್ಮುಖ ಬ್ರಹ್ಮನೇ ಮುಖ್ಯ ಅಧಿಕಾರಿ ಎಂದಿದ್ದಾರೆ, ಆಚಾರ್ಯರು. ಇತರ ದೇವ ಮಾನುಷರು ಅಲ್ಪಜ್ಞಾನಿಗಳು,

ಚಂಚಲಚಿತ್ತರು. ಅವರು ಇಲ್ಲಿ ಹೇಳಿದ ರೂಪವನ್ನು ಮಿಂಚಿನಂತೆ ಅಸ್ಫುಟವಾಗಿ, ಅಲ್ಪಕಾಲದಲ್ಲಿ ಕಾಣುತ್ತಾರೆ. ದೇವತೆಗಳು ಸೂರ್ಯಮಂಡಲದಂತೆ ಕಾಣುತ್ತಾರೆ. ರುದ್ರದೇವ ಕನ್ನಡಿಯಲ್ಲಿ ಕಾಣುವ ಪ್ರತಿಬಿಂಬದಂತೆ. ಸ್ಫುಟವಾಗಿ ಕಾಣುವವನು ಚತುರ್ಮುಖನೊಬ್ಬನೇ.

ಈ ಉಪನಿಷತ್ತಿನ ಕನ್ನಡಾನುವಾದ ಒಂದು ಸುಯೋಗ. ರಾಯರು ಆರಾಧನೆಯ ಸಂದರ್ಭದಲ್ಲಿ ಈ ಯೋಗವನ್ನು ನನ್ನ ಪಾಲಿಗೆ ಒದಗಿಸಿದ್ದಾರೆ. ಇದರ ಸುಕೃತಭಾಗಿಗಳು ಇಬ್ಬರು. ''ಶ್ರೀ ಗುರುರಾಜ ಅಸೋಸಿಯೇಷನ್'' ಈ ಸಂಸ್ಥೆಯ ಪದಾಧಿಕಾರಿಗಳು ಮತ್ತು ಮುದ್ರಣ ವೆಚ್ಚವನ್ನು ನೀಡಿ ಶ್ರೀ ಗುರುರಾಜರಲ್ಲಿ ಭಕ್ತಿ-ಗೌರವಗಳನ್ನು ಹೊಂದಿರುವ ಶ್ರೀಯುತ ಚೈತ್ರ ರಾಘವೇಂದ್ರರಾಯರಿಗೆ. ಶ್ರೀ ಹರಿಗುರುಗಳು ಎಲ್ಲರಿಗೂ ತತ್ತ್ವಜ್ಞಾನಾಸಕ್ತಿಯನ್ನು ನೀಡಿ ಹರಸಲಿ ಎಂಬ ಆಕಾಂಕ್ಷೆಯೊಂದಿಗೆ ಈ ಕೃತಿಕುಸುಮವನ್ನು ಭಗವಂತನಿಗೆ ಅರ್ಪಿಸುತ್ತಿದ್ದೇನೆ.

೧೯. ೦೮. ೨೦೦೪
ಬೆಂಗಳೂರು

ಎ. ಹರಿದಾಸ ಭಟ್ಟ
ಪ್ರಾಚಾರ್ಯರು
ಪೂ.ಪ್ರ.ವಿದ್ಯಾಪೀಠ
ಬೆಂಗಳೂರು.

ಶ್ರೀಮದ್ಧನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣವೇದವ್ಯಾಸಾತ್ಮಕ ಶ್ರೀ ಲಕ್ಷ್ಮೀ ಹಯಗ್ರೀವಾಯ ನಮಃ

# ತೈತ್ತಿರೀಯೋಪನಿಷತ್

## ಶ್ರೀರಾಘವೇಂದ್ರತೀರ್ಥ ವಿರಚಿತ

## ಖಂಡಾರ್ಥ ಸಹಿತ

## ಬ್ರಹ್ಮವಲ್ಲೀ

॥ ಶ್ರೀ ಗುರುಭ್ಯೋನಮಃ ॥

॥ ಹರಿಃ ಓಂ ॥

**ಶಾಂತಿ ಮಂತ್ರ**

**ಓಂ॥ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು । ಮಾ ವಿದ್ವಿಷಾವಹೈ । ಓಂ ಶಾಂತಿಃ ಶಾಂತಿಃ ಶಾಂತಿಃ ॥ ೧ ॥**

ಪರಮಾತ್ಮನು ಗುರು-ಶಿಷ್ಯರಾದ ನಮ್ಮಿಬ್ಬರಲ್ಲೂ ಸನ್ನಿಹಿತನಾಗಿರಲಿ. ನಮ್ಮಿಬ್ಬರನ್ನೂ ಜೊತೆಯಲ್ಲೇ ರಕ್ಷಿಸಲಿ. ಪಾಠ-ಪ್ರವಚನಗಳಲ್ಲಿ ನಮ್ಮ ಸಾಮರ್ಥ್ಯವು ಜೊತೆಯಾಗಿ ವಿನಿಯೋಗವಾಗಲಿ. ನಾವಿಬ್ಬರೂ ಸಮರ್ಥರಾಗುವಂತೆ ಆಗಲಿ. ನಮ್ಮ ಅಧ್ಯಯನವು ಸಫಲವಾಗಲಿ. ಪ್ರಾಮಾದಿಕವಾಗಿಯೂ ನಮ್ಮಿಬ್ಬರಲ್ಲಿ ದ್ವೇಷ ಬೆಳೆಯದಿರಲಿ.

ಸರ್ವತ್ರ ವ್ಯಾಪಿಸಿರುವ, ರಕ್ಷಕನಾದ ವಿಷ್ಣುವಿನಿಂದ ಸ್ವರ್ಗ, ಆಕಾಶ, ಭೂಮಿಯ ಅನಿಷ್ಟಗಳು ಪರಿಹಾರವಾಗಿ ಶಾಂತಿಯು ನೆಲೆಸಲಿ.

### ಶ್ರೀ ರಾಘವೇಂದ್ರ ಸ್ವಾಮಿಗಳು ರಚಿಸಿದ ಖಂಡಾರ್ಥ

**ಯಸ್ಯಾಃ ವಿದ್ಯಾಯಾಃ ಪೂರ್ವಂ ಕರ್ತವ್ಯಾ ವಿದ್ಯಾ ಉಕ್ತ್ವಾ ತಾಮೇವ ವಕ್ತುಂ ವಿಘ್ನವಿಘಾತಿನೀಂ ಶಾಂತಿಂ ಪಠತಿ - ಸಹನಾವಿತಿ ॥**

ತೈತ್ತಿರೀಯ ಉಪನಿಷತ್ತಿನ ಈ ಎರಡನೆಯ ವಲ್ಲಿಯಲ್ಲಿ ಬ್ರಹ್ಮವಿದ್ಯೆಯನ್ನು ನಿರೂಪಿಸಲಾಗಿದೆ. ಅದಕ್ಕೆ ಪೂರಕವಾಗಿ ಹಿಂದಿನ ಶಿಕ್ಷಾವಲ್ಲಿಯಲ್ಲಿ ಸಂಹಿತಾ ವಿದ್ಯೆಯನ್ನು ಹೇಳಲಾಗಿತ್ತು. ಅದನ್ನು ಹೇಳಿ ಮುಗಿಸಿ ಈ ವಲ್ಲಿಯಲ್ಲಿ ಬ್ರಹ್ಮವಿದ್ಯೆಯನ್ನು ಹೇಳುವ ಸಲುವಾಗಿ ವಿಘ್ನನಿವಾರಣೆಯ ಉದ್ದೇಶದಿಂದ ಮೊದಲು ''ಸಹನಾವವತು'' ಎನ್ನುವ ಶಾಂತಿಮಂತ್ರವನ್ನು ಪಠಿಸಲಾಗಿದೆ.

### ಶಾಂತಿ ಮಂತ್ರದ ಅರ್ಥ

**ನೌ ಗುರುಶಿಷ್ಯೌ, ಅವತು = ಅವ ರಕ್ಷಣ -ಗತಿ-ಕಾಂತಿ-ಪ್ರವೇಶ ಇತ್ಯಾದಿ ಧಾತುಪಾಠಾತ್ ಪ್ರವಿಶತು, ಆವಯೋಃ ಸನ್ನಿಧೀಯತಾಂ ಇತ್ಯರ್ಥಃ ।**

**ನೌ ಸಹೈವ, ಭುನಕ್ತು = ಪಾಲಯತು, ಭುಜ ಪಾಲನಾಭ್ಯವಹಾರಯೋಃ ಇತಿ ಧಾತುಃ ।**

ನೌ ಎಂದರೆ ನಮ್ಮಿಬ್ಬರನ್ನು ಅಂದರೆ ಗುರು ಮತ್ತು ಶಿಷ್ಯರನ್ನು, ಅವತು ಎಂದರೆ ಪ್ರವೇಶ ಮಾಡಲಿ. ಅವ ಎಂಬ ಧಾತುವಿಗೆ ರಕ್ಷಣೆ ಮಾಡು, ಚಲಿಸು, ಕಾಂತಿ ಮುಂತಾದ ಅರ್ಥವಿರುವುದರಿಂದ ಅವತು ಎಂದರೆ ಪ್ರವೇಶ ಮಾಡಲಿ ಎಂದೂ ಅರ್ಥವಾಗುತ್ತದೆ. ಇದರ ಅಭಿಪ್ರಾಯ - ನಮ್ಮಿಬ್ಬರಲ್ಲಿ ಭಗವಂತನು ಸನ್ನಿಹಿತನಾಗಿರಲಿ ಎಂದು.

ನೌ, ಸಹೈವ = ನಮ್ಮಿಬ್ಬರನ್ನು ಜೊತೆಯಾಗಿಯೇ, ಭುನಕ್ತು = ರಕ್ಷಿಸಲಿ, 'ಭುನಕ್ತು' ಎಂಬ ಕ್ರಿಯಾಪದದ ಮೂಲರೂಪ ಭುಜ್. ಅದಕ್ಕೆ ರಕ್ಷಣೆ ಮಾಡು, ತಿನ್ನು ಎಂಬ ಎರಡೂ ಅರ್ಥಗಳಿವೆ.

**ವ್ಯಾಖ್ಯಾನವಿಷಯೇ, ವೀರ್ಯಂ = ಸಾಮರ್ಥ್ಯಂ ಸಹ ಕರವಾವಹೈ ।**

**ತೇಜಸ್ವಿನೌ, ಭವಾವ ಇತಿ ಯೋಜ್ಯಮ್ । ಅಧೀತಂ ಫಲಪ್ರದಮಸ್ತು । ನೌ = ಆವಾಭ್ಯಾಂ, ಅಧೀತಂ ತೇಜಸ್ವಿನೌ ಅಸ್ತು ಇತಿ ವಾ ।**

ಪಾಠ ಪ್ರವಚನಗಳಲ್ಲಿ ವೀರ್ಯಂ = ನಮ್ಮ ಶಕ್ತಿಯನ್ನು, ಸಹ ಕರವಾವಹೈ = ಜೊತೆಯಾಗಿ ಉಪಯೋಗಿಸುವೆವು.

'ತೇಜಸ್ವಿನೌ ಅಧಿತಮಸ್ತು' ಎಂಬಲ್ಲಿ ತೇಜಸ್ವಿನೌ ಎಂಬ ಪದದ ಜೊತೆಯಲ್ಲಿ ಭವಾವ ಎಂಬ ಕ್ರಿಯಾಪದವನ್ನು ಜೋಡಿಸಿಕೊಳ್ಳಬೇಕು. ನಾವಿಬ್ಬರೂ ಶಕ್ತಿಪೂರ್ಣರಾಗುತ್ತೇವೆ ಎಂದರ್ಥ.

ಅಧೀತಂ ಎನ್ನುವುದರ ಜೊತೆಯಲ್ಲಿ ಫಲಪ್ರದಂ ಎಂಬ ಶಬ್ದವನ್ನು ಸೇರಿಸಿದಾಗ ''ಅಧೀತಂ ಫಲಪ್ರದಂ ಅಸ್ತು'' ಎಂದು ವಾಕ್ಯವಾಗುತ್ತದೆ. ನಮ್ಮ ಅಧ್ಯಯನ ಸಫಲವಾಗಲಿ ಎಂದು ಅರ್ಥ.

ಹೀಗೆ ಎರಡು ವಾಕ್ಯಗಳನ್ನಾಗಿಯೂ ಮಾಡಿಕೊಳ್ಳಬಹುದು. ಅಥವಾ ಒಂದೇ ವಾಕ್ಯವೆಂದೂ ಪರಿಗಣಿಸಬಹುದು. ನೌ = ನಮಗಾಗಿ, ಅಧೀತಂ = ಅಧ್ಯಯನ ಮಾಡಲ್ಪಟ್ಟ ವಿಷಯವು, ತೇಜಸ್ವಿ = ಶಕ್ತಿಯುತವಾಗಿ, ಅಸ್ತು = ಆಗಲಿ.

**ಮಾ ವಿದ್ವಿಷಾವಹೈ = ವಿದ್ಯಾಗ್ರಹಣ ನಿಮಿತ್ತಂ ಶಿಷ್ಯಸ್ಯ ಗುರೋರ್ವಾ ಪ್ರಮಾದಕೃತಾಪರಾಧಾತ್ ಪ್ರಾಪ್ತಂ ವಿದ್ವೇಷಂ ನೈವ ಕರವಾವ ಇತ್ಯರ್ಥಃ। ತ್ರಿಃ ಶಾಂತಿಪಾಠಸ್ಯ ಬೀಜಂ ಉಕ್ತಮೇವ ಧ್ಯೇಯಮ್ ॥ ೧ ॥**

'ಮಾ ವಿದ್ವಿಷಾವಹೈ' ಎಂದರೆ ವಿದ್ಯಾಭ್ಯಾಸಕ್ಕಾಗಿ ಗುರು ಅಥವಾ ಶಿಷ್ಯರಿಂದ ನಡೆದ ಪ್ರಾಮಾದಿಕವಾದ ಅಪರಾಧದಿಂದ ಮುಂದೆ ದ್ವೇಷವು ಬೆಳೆಯದಿರಲಿ ಎಂದು ಅರ್ಥ.

ಹಿಂದೆ ಶಿಕ್ಷಾವಲ್ಲಿಯಲ್ಲಿ ಹೇಳಿದಂತೆ, ಮೂರು ಬಾರಿ 'ಶಾಂತಿಃ' ಎಂದು ಹೇಳಿದ ಉದ್ದೇಶವನ್ನು ಸ್ವರ್ಗ-ಆಕಾಶ-ಭೂಮಿ ಈ ಮೂರರಲ್ಲೂ ಅನಿಷ್ಟ ಪರಿಹಾರವಾಗಿ ಶಾಂತಿ ನೆಲಸಲಿ, ಎಂದು ತಿಳಿಯಬೇಕು.

ಉಪನಿಷತ್ತು

**ಓಂ ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನಂತಂ ಬ್ರಹ್ಮ । ಯೋ ವೇದ ನಿಹಿತಂ ಗುಹಾಯಾಮ್ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತೇತಿ ॥ ೨ ॥**

ಪರಬ್ರಹ್ಮ ಜ್ಞಾನಿಯು ಪರಬ್ರಹ್ಮನ ಬಳಿ ಸೇರುತ್ತಾನೆ. ಇದರ ಬಗ್ಗೆ ಬರುವ ಜಿಜ್ಞಾಸೆಗಳಿಗೆಲ್ಲ ಉತ್ತರವಾಗಿ ಹೀಗೊಂದು ಮಂತ್ರವಿದೆ-

ಈ ಜಗತ್ತಿನ ಸೃಷ್ಟಿ, ಸ್ಥಿತಿ, ಕ್ರಿಯಾಶೀಲತೆ ಮತ್ತು ಸಂಹಾರಗಳನ್ನು (ಸತ್ಯಂ) ಮಾಡುವವನು, ಸರ್ವಜ್ಞನು, ದೇಶ-ಕಾಲ-ಗುಣಗಳ ಪರಿಮಿತಿಯನ್ನು ಮೀರಿರುವವನು ಬ್ರಹ್ಮ. ಇಂತಹ ಬ್ರಹ್ಮನು ಎಲ್ಲ ಚೇತನಗಳ ಹೃದಯಾಕಾಶದಲ್ಲಿ ನೆಲೆಸಿರುತ್ತಾನೆ. ಅವನನ್ನು ಪ್ರತ್ಯಕ್ಷೀಕರಿಸಿಕೊಂಡ ಸಾಧಕನು ಬ್ರಹ್ಮನೊಂದಿಗೆ ತನ್ನ ಯೋಗ್ಯತೆಗೆ ಅನುಗುಣವಾದ ಎಲ್ಲ ಅಭೀಷ್ಟಗಳನ್ನೂ ಅನುಭವಿಸುತ್ತಾನೆ.

**ಪ್ರಧಾನ ಬ್ರಹ್ಮವಿದ್ಯಾಮಾಹ - ಬ್ರಹ್ಮವಿದಿತಿ ॥**

ಪ್ರಥಮ ವಲ್ಲಿಯಲ್ಲಿ ಹೇಳಿರುವ ಸಂಹಿತಾವಿದ್ಯೆಯಿಂದ ಲಭ್ಯವಾಗುವ ಬ್ರಹ್ಮವಿದ್ಯೆಯನ್ನು ಇಲ್ಲಿ ಹೇಳಲಾಗಿದೆ.

**ಬ್ರಹ್ಮವಿತ್ = ಬ್ರಹ್ಮ ಜ್ಞಾನೀ, ಪರಂ ಬ್ರಹ್ಮ ಪ್ರಾಪ್ನೋತಿ । ಏತೇನ ಪರಬ್ರಹ್ಮಪ್ರಾಪ್ತಿಕಾಮಃ ಪರಂ ಬ್ರಹ್ಮ ವಿದ್ಯಾತ್ ಇತ್ಯುಕ್ತಂ ಭವತಿ ।**

ಬ್ರಹ್ಮವಿತ್ ಎಂದರೆ ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡವನು, ಆ ಪರಬ್ರಹ್ಮನನ್ನೇ ಹೊಂದುತ್ತಾನೆ. ಇದರ ಅಭಿಪ್ರಾಯ-ಪರಮಾತ್ಮನ ಬಳಿ ಸೇರಲು ಬಯಸುವವನು ಅವನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಬೇಕು, ಎಂದು.

## ಬ್ರಹ್ಮನ ಲಕ್ಷಣ

**ತತ್ರ ಕಿಂ ಲಕ್ಷಣಕಂ ಬ್ರಹ್ಮ? ಕಥಂ ಚ ತದ್ವೇದನಮ್ ? ನ ಹಿ ಬ್ರಹ್ಮಪದೇನ ಪ್ರತೀತಸ್ಯ ಅಪರಿಚ್ಛಿನ್ನಸ್ಯ ಸಾಕ್ಷಾತ್ಕಾರೋ ಯುಕ್ತಃ । ಕೀದೃಶೀ ಚ ತತ್ಪ್ರಾಪ್ತಿಃ ಯಾ ಜ್ಞಾನಸಾಧ್ಯಾ? ಸರ್ವಗತತ್ವೇನ ನಿತ್ಯ ಪ್ರಾಪ್ತತ್ವಾತ್ ಇತಿ-ಉತ್ಪನ್ನ ಶಂಕಾತ್ರಯಸ್ಯ ಕ್ರಮೇಣ ಪರಿಹಾರಾರ್ಥಂ ಪ್ರಸ್ತಾವ್ಯಮಂತ್ರಂ ಉದಾಹರತಿ ಉಪನಿಷತ್— ''ತದೇಷಾಭ್ಯುಕ್ತಾ'' ಇತ್ಯಾದಿನಾ ।**

**ತದಭಿ = ಏತದಾಶಂಕಾತ್ರಯಂ ಪ್ರತಿ, ತತ್ ಸಮಾಧ್ಯರ್ಥಂ ಇತಿ ಯಾವತ್, ಏಷಾ = ಋಕ್, ಉಕ್ತಾ = ಉಚ್ಯತೇ ಇತ್ಯರ್ಥಃ ॥**

"ಬ್ರಹ್ಮಜ್ಞಾನಿಯು ಬ್ರಹ್ಮನನ್ನು ಹೊಂದುತ್ತಾನೆ" ಎಂದಾಗ ಮೂರು ಪ್ರಶ್ನೆಗಳು ಹುಟ್ಟುತ್ತವೆ.

೧. ಆ ಬ್ರಹ್ಮನ ಗುಣಧರ್ಮಗಳೇನು?

೨. ಅವನನ್ನು ಕಾಣುವುದು ಹೇಗೆ? ಏಕೆಂದರೆ, 'ಬ್ರಹ್ಮ' ಎಂಬ ಶಬ್ದದ ಅರ್ಥ ದೇಶ-ಕಾಲಗಳ ಮಿತಿಯನ್ನು ಮೀರಿದವನು. ಇಂತಹವನನ್ನು ನೋಡುವುದಾದರೂ ಹೇಗೆ?

೩. ಅವನ ದರ್ಶನದಿಂದ ಆಗುವ ಅವನ ಪ್ರಾಪ್ತಿ ಎಂದರೇನು? ಏಕೆಂದರೆ, ಅವನು ಎಲ್ಲ ಕಡೆಯೂ ಇದ್ದಾನೆ. ಅಂದಮೇಲೆ ಈಗಾಗಲೇ ನಾವೆಲ್ಲ ಅವನ ಜೊತೆಯಲ್ಲೇ ಇದ್ದೇವಲ್ಲಾ?

ಹೀಗೆ ಬರುವ ಈ ಮೂರು ಪ್ರಶ್ನೆಗಳ ಪರಿಹಾರಕ್ಕಾಗಿ ಈ ಉಪನಿಷತ್ತು ಮಂತ್ರವೊಂದನ್ನು ಪ್ರಸ್ತಾಪಿಸಿದೆ.

ತದೇಷಾಭ್ಯುಕ್ತಾ ಎಂದರೆ, ತದಭಿ = ಈ ಮೂರು ಪ್ರಶ್ನೆಗಳಿಗೆ ಪ್ರತಿಯಾಗಿ, ಏಷಾ = ಈ ಮುಂದಿನ ಮಂತ್ರವು, ಉಕ್ತಾ= ಹೇಳಲ್ಪಟ್ಟಿದೆ ಎಂದರ್ಥ.

ವಿಶೇಷಾಂಶ-ಶ್ರೀವಾದಿರಾಜರು "ತದೇಷಾಭ್ಯುಕ್ತಾ" ಎನ್ನುವ ಉಪನಿಷದ್ವಾಕ್ಯಕ್ಕೆ ಹೀಗೆ ಅರ್ಥ ಹೇಳಿದ್ದಾರೆ. ತತ್ = ಹಿಂದೆ ಪ್ರಸ್ತುತನಾದ ಬ್ರಹ್ಮನ ಬಗ್ಗೆ, ಏಷಾ = ಮುಂದೆ ಹೇಳಲಿರುವ ವಿದ್ಯೆಯು, ಉಕ್ತಾ = ಮುನಿಗಳಿಂದ ಹೇಳಲ್ಪಟ್ಟಿದೆ.

**ಸತ್ಯಂ ಜ್ಞಾನಮನಂತಂ ಬ್ರಹ್ಮೇತಿ ಲಕ್ಷಣ ಶಂಕಾಯಾಃ ಉತ್ತರಮ್ । ಪ್ರತ್ಯೇಕಂ ಲಕ್ಷಣತ್ವಾತ್ ತ್ರೀಣಿ ಲಕ್ಷಣಾನಿ ಅವಶ್ಯಂ ಜ್ಞಾತವ್ಯತ್ವಾತ್ ಉಕ್ತಾನಿ ।**

**ಸತ್ಯತ್ವಂ ನಾಮ ಜಗತ್ ಸ್ರಷ್ಟೃತ್ವಂ, ಜಗಜ್ಜೀವನ ಪ್ರದತ್ವಂ, ಜಗಚ್ಚೇಷ್ಟಕತ್ವಂ, ಜಗತ್ ಸಂಹರ್ತೃತ್ವಂ ಚ ಇತಿ ಜ್ಞಾತವ್ಯಮ್ ।**

**ಸದಿತಿ ಸದ್ಭಾವಃ ಜನ್ಮೇತಿ ಯಾವತ್, ಸತ್ವಂ = ಜೀವನಂ ಪ್ರವರ್ತನಂ ಚ, ಸತ್ವಂ = ವಿಶರಣಂ ನಾಶಮಿತಿ ಯಾವತ್, 'ಷದ್ಲೃ ವಿಶರಣೇ' ಇತಿ ಧಾತೋಃ, ಯಾಪಯತಿ ಇತಿ ವ್ಯುತ್ಪತ್ತ್ಯಾ ಸತ್ಯಶಬ್ದೇನ ಅರ್ಥ ಚತುಷ್ಟಯಸ್ಯಾಪಿ ಪ್ರತೀತೇಃ ।**

ಮಂತ್ರದ ಪ್ರಾರಂಭದಲ್ಲಿರುವ ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎನ್ನುವ ವಾಕ್ಯ ಬ್ರಹ್ಮನ ಲಕ್ಷಣವೇನು ಎನ್ನುವ ಪ್ರಶ್ನೆಗೆ ಉತ್ತರವಾಗಿದೆ. ಈ ಮೂರು ಸೇರಿ ಒಂದು ಲಕ್ಷಣವಲ್ಲ, ಅವುಗಳಲ್ಲಿ ಒಂದೊಂದೂ ಬ್ರಹ್ಮನ ಲಕ್ಷಣ. ಅನೇಕ ಲಕ್ಷಣಗಳಿದ್ದರೂ ಈ ಮೂರನ್ನು ತಿಳಿಯಲೇ ಬೇಕಾದುದರಿಂದ ಹೇಳಲಾಗಿದೆ.

ಮೊದಲ ಲಕ್ಷಣ ''ಸತ್ಯತ್ವ''. ಜಗತ್ತಿನ ಸೃಷ್ಟಿ, ಸ್ಥಿತಿ, ಕ್ರಿಯಾಶೀಲತೆ, ಲಯಗಳನ್ನು ಮಾಡುವವನು ಬ್ರಹ್ಮ ಎಂದರ್ಥ.

''ಸತ್ವಂ ಯಾಪಯತಿ'' ಎನ್ನುವ ಅರ್ಥವನ್ನು ಸತ್ಯ ಶಬ್ದವು ಕೊಡುತ್ತದೆ. ಸತ್ವ ಎಂದರೆ ಇಲ್ಲದೇ ಇದ್ದ ವಸ್ತುವಿಗೆ ಇರುವ ಸ್ಥಿತಿ ಬರುವುದು, ಅಂದರೆ ಉತ್ಪತ್ತಿ ಎಂದರ್ಥ. ಅಂತೆಯೇ ಹುಟ್ಟಿದ ವಸ್ತು ಉಳಿಯುವುದು ಹಾಗೂ ಕ್ರಿಯಾಶೀಲ-ವಾಗುವುದೂ ಆ ವಸ್ತುವಿನ ಸತ್ವವೆನಿಸುತ್ತದೆ. 'ಸತ್' ಶಬ್ದವು 'ಷದ್' ಧಾತುವಿನಿಂದಾಗಿದೆ. ಆ ಧಾತುವಿಗೆ 'ನಾಶ' ಎಂಬ ಅರ್ಥವೂ ಇದೆ. ಹೀಗೆ ಈ ನಾಲ್ಕನ್ನು ಜಗತ್ತಿಗೆ ಕೊಡುವವನು 'ಸತ್ಯ'.

**ವಿಶೇಷಾಂಶ** — ಶ್ರೀ ವಾದಿರಾಜರು ಸತ್ಯ ಶಬ್ದದಿಂದ ಮೂರು ಲಕ್ಷಣಗಳನ್ನು ಮಾತ್ರ ಸಂಗ್ರಹಿಸಿದ್ದಾರೆ - ಸೃಷ್ಟಿ, ಸ್ಥಿತಿ, ಲಯ. ''ವ್ಯಾಸ ಸೂತ್ರೋಕ್ತ ಲಕ್ಷಣತ್ರಯಂ ಸತ್ಯಪದೇನ ಸಂಗೃಹೀತಮ್''. ಶ್ರೀ ವೇದವ್ಯಾಸರು ''ಜನ್ಮಾದ್ಯಸ್ಯ ಯತಃ'' ಎಂಬ ಸೂತ್ರದಲ್ಲಿ ಹೇಳಿರುವ ಮೂರು ಲಕ್ಷಣಗಳನ್ನು 'ಸತ್ಯ' ಎಂಬ ಪದವು ಹೇಳುತ್ತದೆ, ಎಂದು ಅವರ ವಾಕ್ಯ.

**ಜ್ಞಾನತ್ವಂ ಸ್ವ-ಪರಗತ-ಅಶೇಷ ಸಾಮಾನ್ಯ-ವಿಶೇಷ ವಿಷಯಕ ಜ್ಞಾನ-ರೂಪತ್ವಮ್ । ಅನಂತತ್ವಂ ಚ ದೇಶ-ಕಾಲ-ಗುಣ-ಅಪರಿಚ್ಛಿನ್ನತ್ವಮ್ ।**

ಎರಡನೆಯ ಲಕ್ಷಣವಾಚಕ ಪದ 'ಜ್ಞಾನಂ'. ತನ್ನಲ್ಲಿ ಹಾಗೂ ಇತರರಲ್ಲಿ ಇರುವ ಎಲ್ಲಾ ವಿಷಯಗಳನ್ನೂ ಸಾಮಾನ್ಯವಾಗಿ ಹಾಗೂ ವಿಶೇಷವಾಗಿ ತಿಳಿದವನು ಎಂದರ್ಥ.

ಅನಂತನೆಂದರೆ, ದೇಶ-ಕಾಲ-ಗುಣಗಳ ಎಲ್ಲೆಯನ್ನು ಮೀರಿ ನಿಂತವನು.

**ವಿಶೇಷಾಂಶ** — ಶ್ರೀ ರಾಘವೇಂದ್ರ ಸ್ವಾಮಿಗಳ ವಿವರಣೆಯಂತೆ ಉಪನಿಷತ್ತಿನಲ್ಲಿರುವ ಮೂರು ಶಬ್ದಗಳು ಒಟ್ಟು ಏಳು ಲಕ್ಷಣಗಳನ್ನು ತಿಳಿಸುತ್ತವೆ. ಅವುಗಳಲ್ಲಿ ನಾಲ್ಕು ಲಕ್ಷಣಗಳನ್ನು ಸತ್ಯ ಶಬ್ದವೇ ಹೇಳುತ್ತದೆ. ಎರಡು ಲಕ್ಷಣಗಳನ್ನು

ಜ್ಞಾನಶಬ್ದವು ಹೇಳುತ್ತದೆ. ದೇಶಾದಿ ಪರಿಮಿತಿ ಇಲ್ಲದವನು ಎನ್ನುವುದನ್ನು ಒಂದು ಲಕ್ಷಣವನ್ನಾಗಿ ಪರಿಗಣಿಸಿದಾಗ ಅದನ್ನು ಅನಂತ ಪದವು ಹೇಳುತ್ತದೆ.

ಮುಂದೆ ಉಪನಿಷತ್ತಿನಲ್ಲಿ ಆರು ಪ್ರಕರಣಗಳಿವೆ. ಅವುಗಳಲ್ಲಿ ಮೊದಲ ಪ್ರಕರಣದಲ್ಲಿ ''ಆತ್ಮನಃ ಆಕಾಶಃ ಸಂಭೂತಃ'' ಎಂದು ಮುಂತಾಗಿ ಬ್ರಹ್ಮನಿಗೆ ಸೃಷ್ಟಿಕರ್ತೃತ್ವವನ್ನು ವಿವರಿಸಲಾಗಿದೆ.

ಎರಡನೆಯ ಅನ್ನಮಯ ಪ್ರಕರಣದಲ್ಲಿ ಸ್ಥಿತಿ ಮತ್ತು ಲಯಕರ್ತೃತ್ವವನ್ನು ವಿವರಿಸಲಾಗಿದೆ. ಏಕೆಂದರೆ ಅನ್ನ ಶಬ್ದಕ್ಕೆ ''ಅದ್ಯತೇ, ಅತ್ತಿ'' ಎಂದು ಎರಡು ಅರ್ಥಗಳನ್ನು ಉಪನಿಷತ್ತೇ ಹೇಳಿದೆ. ಅದ್ಯತೇ ಎಂದರೆ ಜಗತ್ತಿನ ಸ್ಥಿತಿಗೆ ಕಾರಣ ಎಂದರ್ಥ. ಅತ್ತಿ ಎಂದರೆ ಸಂಹಾರ ಕರ್ತೃ.

ಪ್ರಾಣಮಯ ಪ್ರಕರಣದಲ್ಲಿ ಜಗಚ್ಚೇಷ್ಟಕತ್ವವನ್ನು ಅಂದರೆ ಜಗತ್ತಿಗೆ ಕ್ರಿಯಾಶೀಲತೆಯನ್ನು ಕೊಡುವವನು ಎಂಬ ಲಕ್ಷಣದ ವಿವರಣೆ ಬಂದಿದೆ.

ಮನೋಮಯ ಪ್ರಕರಣದಲ್ಲಿ ಸರ್ವ ವಸ್ತುಗಳ ಸಾಮಾನ್ಯಜ್ಞಾನವನ್ನೂ ವಿಜ್ಞಾನಮಯ ಪ್ರಕರಣದಲ್ಲಿ ಸರ್ವವಸ್ತುಗಳ ವಿಶೇಷಜ್ಞಾನ ಎಂಬ ಲಕ್ಷಣವನ್ನೂ ವಿವರಿಸಲಾಗಿದೆ.

ಕೊನೆಯದಾದ ಆನಂದಮಯ ಪ್ರಕರದಲ್ಲಿ ಅನಂತತೆಗೆ ಸಮರ್ಥನೆಯಾಗಿ ಬ್ರಹ್ಮನಿಗೆ ಆನಂದಮಯತ್ವವನ್ನು ಹೇಳಲಾಗಿದೆ.

ಶ್ರೀವಾದಿರಾಜರು ಸತ್ಯ ಪದದಿಂದ ಉತ್ಪತ್ತಿ, ಸ್ಥಿತಿ, ಸಂಹಾರಗಳನ್ನೂ ಜ್ಞಾನಪದದಿಂದ ಸೃಷ್ಟಿಗೆ ಕಾರಣವಾದ ಸರ್ವಜ್ಞತ್ವವನ್ನೂ ಅನಂತಪದದಿಂದ ಸೃಷ್ಟಿಗೆ ಆವಶ್ಯಕವಾದ ಆನಂದಪೂರ್ಣತ್ವವನ್ನೂ ಸಂಗ್ರಹಿಸಿ ಒಟ್ಟು ಐದು ಲಕ್ಷಣಗಳನ್ನು ಹೇಳಿದ್ದಾರೆ.

ಭಗವಂತನು ಜಗತ್ತಿನ ಸೃಷ್ಟಿ ಮಾಡಬೇಕಾದರೆ ಈ ಜಗತ್ತಿನ ಸಮಗ್ರ ಪರಿಜ್ಞಾನ ಅವನಿಗಿರಬೇಕು. ಆದ್ದರಿಂದ ಅವನು ಸರ್ವಜ್ಞ. ಆಪ್ತಕಾಮನಾದ ಅವನು ಜಗತ್ತಿನ ಸೃಷ್ಟಿಕ್ರಿಯೆಯಲ್ಲಿ ತೊಡಗಲು ಕಾರಣ ಆನಂದೋದ್ರೇಕ. ಹಾಗೆಂದು ಇದೇ ಉಪನಿಷತ್ತಿನಲ್ಲಿ — ''ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್'' ಎಂದು ಹೇಳಲಾಗಿದೆ. ಹೀಗೆ ಸೃಷ್ಟಿ, ಸ್ಥಿತಿ, ಸಂಹಾರಗಳು ಮೂರು. ಆ ಮೂರಕ್ಕೆ ಪೋಷಕವಾಗಿ ಜ್ಞಾನ ಆನಂದಗಳು. ಹೀಗೆ ಒಟ್ಟು ಐದು ಲಕ್ಷಣಗಳು ಐದು ಪ್ರಕರಣಗಳಿಂದ

ಪ್ರತಿಪಾದಿಸಲ್ಪಡುತ್ತವೆ. ಅನ್ನಮಯ ಪ್ರಕರಣದಲ್ಲಿ ಜಗತ್ ಸೃಷ್ಟಿಕರ್ತೃತ್ವ ಮತ್ತು ಸಂಹಾರಕರ್ತೃತ್ವವನ್ನು ಹೇಳಲಾಗಿದೆ. ಸೃಷ್ಟಿಕರ್ತೃ ಬ್ರಹ್ಮ, ಸಂಹಾರಕರ್ತೃ ಶಿವ ಎಂಬ ಪ್ರವಾದವಿರುವುದರಿಂದ ಅವೆರಡನ್ನು ಮೊದಲು ಸಮರ್ಥಿಸಲಾಗಿದೆ. ಸ್ಥಿತಿಕರ್ತೃತ್ವವನ್ನು ಪ್ರಾಣಮಯ ಪ್ರಕರಣದಲ್ಲೂ ಸಾಮಾನ್ಯತಃ ಸರ್ವಜ್ಞತ್ವವನ್ನು ಮನೋಮಯ ಪ್ರಕರಣದಲ್ಲೂ ವಿಶೇಷತಃ ಸರ್ವಜ್ಞತ್ವವನ್ನು ವಿಜ್ಞಾನಮಯ ಪ್ರಕರಣದಲ್ಲೂ ವಿವರಿಸಲಾಗಿದೆ. 'ಅನಂತತ್ವ'ವನ್ನು ಆನಂದಮಯ ಪ್ರಕರಣದಲ್ಲಿ ನಿರೂಪಿಸಲಾಗಿದೆ. ಆನಂದಗುಣ ಉಪಲಕ್ಷಣ. ಸೃಷ್ಟಿಗೆ ಉಪಯುಕ್ತವಾದ ಎಲ್ಲ ಗುಣಗಳನ್ನೂ ಆನಂದ ಶಬ್ದವು ಹೇಳುತ್ತದೆ. ''ಮಹದ್ಗುಣತ್ವಾತ್ ಯಮ-ನಂತಮಾಹುಃ'' ಎಂಬ ಸ್ಮೃತಿಯು 'ಅನಂತ' ಎಂಬ ಶಬ್ದಕ್ಕೆ 'ಮಹಾಗುಣ-ಗಳಿದ್ದವನು'' ಎಂಬ ಅರ್ಥವನ್ನು ಹೇಳುತ್ತದೆ.

ಹೀಗೆ ಶ್ರೀವಾದಿರಾಜರ ವಿವರಣೆ ಇದೆ.

**ದ್ವಿತೀಯ ಶಂಕೋತ್ತರಂ 'ಯೋ ವೇದ' ಇತಿ । ಅಪರಿಚ್ಛಿನ್ನ ಪರಿಮಾಣಸ್ಯಾಪಿ ಸ್ವಶಕ್ತ್ಯಾ ಭಕ್ತಾನುಕಂಪಯಾ ಅಲ್ಪ ಪರಿಮಾಣಮ್, ಅಕ್ಷರೇನಯೋಕ್ತದಿಶಾ ವಿದ್ಯಮಾನಮೇವ ಪ್ರಕಟಯತ್ ಸರ್ವಜೀವೋಪಕಾರಿ, ಕಾರ್ಯಕಾರಣ ಪ್ರೇರಕತಯಾ ತದ್ ಹೃದಯ ಗುಹಾವಸ್ಥಿತಂ 'ಯೋ ವೇದ' ಇತ್ಯರ್ಥಃ ।**

'ಬ್ರಹ್ಮನ ಜ್ಞಾನ ಎಂದರೆ ಹೇಗೆ?' ಎನ್ನುವ ಎರಡನೆಯ ಪ್ರಶ್ನೆಗೆ ''ಯೋ ವೇದ ನಿಹಿತಂ ಗುಹಾಯಾಂ' ಎಂದು ಉತ್ತರ.

ಬ್ರಹ್ಮನಿಗೆ ಗಾತ್ರದ ಮಿತಿ ಇಲ್ಲ. ಅವನು ಎಲ್ಲೆಡೆ ವ್ಯಾಪಿಸಿದ್ದಾನೆ. ಆದರೂ ಭಕ್ತರ ಮೇಲಿನ ಅನುಕಂಪೆಯಿಂದ ಪರಿಮಿತವಾದ ಹೃದಯಾಕಾಶದಲ್ಲಿರುವಷ್ಟೇ ಚಿಕ್ಕ ಪರಿಮಾಣವನ್ನೂ ಪರಮಾತ್ಮ ಪಡೆಯುತ್ತಾನೆ. ಅಂತಹ ಪರಿಮಾಣ ಅಲ್ಪದೇಶದಲ್ಲಿರುವ ನಿಮಿತ್ತದಿಂದ ಅಸ್ವಾಭಾವಿಕವಲ್ಲ. ಸ್ವಾಭಾವಿಕವಾಗಿಯೇ ಇರುವ ಅಲ್ಪ ಪರಿಮಾಣವನ್ನು ಬ್ರಹ್ಮನು ಪ್ರಕಟಿಸುತ್ತಾನೆ. ಈ ತಥ್ಯವನ್ನು ಬ್ರಹ್ಮಸೂತ್ರದ ಅಕ್ಷರಾಧಿಕರಣದಲ್ಲಿ (೧-೩-೩) ಹೇಳಲಾಗಿದೆ. ಹೀಗೆ ಸಕಲ ಜೀವರಿಗೂ ಉಪಕಾರವಾಗುವಂತೆ, ಪ್ರೇರಕನಾಗಿ ಅವರವರ ಹೃದಯಾವಕಾಶದಲ್ಲಿ ಪರಮಾತ್ಮನು ನೆಲೆಸಿದ್ದಾನೆ ಎಂದು ಯಾರು ತಿಳಿಯುವನೋ (ಅವನು ಮುಕ್ತನಾಗುತ್ತಾನೆ).

**ವಿವರಣೆ** — ಅಕ್ಷರಾಧಿಕರಣ ಬ್ರಹ್ಮಸೂತ್ರದ ಮೊದಲನೆಯ ಅಧ್ಯಾಯದ ಮೂರನೆಯ ಪಾದದ ಮೂರನೆಯ ಅಧಿಕರಣ. ಅಲ್ಲಿ ಆಚಾರ್ಯರು

ಪ್ರಮಾಣಗಳ ಆಧಾರವನ್ನು ನೀಡಿ ಪರಮಾತ್ಮನಲ್ಲಿ ಪ್ರಾಕೃತ ವಸ್ತುಗಳಲ್ಲಿರುವ ಸ್ಥೂಲತ್ವ-ಸೂಕ್ಷ್ಮತ್ವಗಳನ್ನು ನಿರಾಕರಿಸಿ ಸ್ವಾಭಾವಿಕವಾದ ಅಣುತ್ವ-ಮಹತ್ವಗಳನ್ನು ಸಮರ್ಥಿಸಿದ್ದಾರೆ.

**ತೃತೀಯ ಶಂಕೋತ್ತರಂ – ಸೋಽಶ್ನುತೇ ಇತಿ ॥ ನ ಸಂಯೋಗಾದಿಮಾತ್ರಂ ತತ್ ಪ್ರಾಪ್ತಿಃ, ಯೇನ ಜ್ಞಾನಸಾಧ್ಯಾ ನ ಸ್ಯಾತ್ । ಕಿಂತು, ವಿಪಶ್ಚಿತಾ = ಸರ್ವಜ್ಞೇನ, ಬ್ರಹ್ಮಣಾ = ಸ್ಥಲ ವಿಶೇಷೇ ಅಭಿವ್ಯಕ್ತತಯಾ ಸ್ಥಿತೇನ ಪರಬ್ರಹ್ಮಣಾ ವಿರಿಂಚೇನ ವಾ, ಸಹ ಸರ್ವಾನ್ ಸ್ವಯೋಗ್ಯಾನ್ ಕಾಮಾನ್ ಭುಂಕ್ತೇ ಇತಿ ತೇನ ಸಹ ತದಧೀನತಯಾ ಸುಖಭೋಗ ಏವ ತತ್ ಪ್ರಾಪ್ತಿರಿತಿ ತದಭಿಪ್ರಾಯಃ ।**

**ಇತಿ ಶಬ್ದಸ್ಯ ಇತ್ಯೇಷಾ ಅಭ್ಯುಕ್ತಾ ಇತಿ ಪೂರ್ವೇಣ ಅನ್ವಯಃ ॥ ೨ ॥**

ಬ್ರಹ್ಮನ ಪ್ರಾಪ್ತಿ ಹೀಗೆ ಎನ್ನುವ ಮೂರನೆಯ ಪ್ರಶ್ನೆಗೆ — 'ಸೋಽಶ್ನುತೇ ಸರ್ವಾನ್ ಕಾಮಾನ್' ಇತ್ಯಾದಿಯಾಗಿ ಉತ್ತರ ನೀಡಲಾಗಿದೆ.

ಬ್ರಹ್ಮಪ್ರಾಪ್ತಿ ಎಂದರೆ ಅವನ ಜೊತೆ ಸಂಯೋಗವಲ್ಲ. ಅದೇ ಪ್ರಾಪ್ತಿಯಾಗಿದ್ದಿದ್ದರೆ, ವ್ಯಾಪ್ತನಾದ ಬ್ರಹ್ಮನ ಸಂಯೋಗವು ಸದಾ ಇರುವುದರಿಂದ ಅದಕ್ಕಾಗಿ ಜ್ಞಾನದ ಆಗತ್ಯವೇ ಇರುತ್ತಿರಲಿಲ್ಲ. ಹೊರತು, ವಿಪಶ್ಚಿತಾ = ಸರ್ವಜ್ಞನಾದ ಬ್ರಹ್ಮಣಾ = ವೈಕುಂಠಾದಿಲೋಕಗಳಲ್ಲಿ ಅಭಿವ್ಯಕ್ತನಾಗಿರುವ ಪರಮಾತ್ಮನೊಂದಿಗೆ ಅಥವಾ ಚತುರ್ಮುಖ ಬ್ರಹ್ಮದೇವರೊಂದಿಗೆ ಸಾಧಕನು ತನ್ನ ಯೋಗ್ಯತೆಗೆ ತಕ್ಕಂತೆ ಅಭೀಷ್ಟಗಳನ್ನು ಪೂರೈಸಿಕೊಳ್ಳುತ್ತಾನೆ. ಹೀಗೆ, ಬ್ರಹ್ಮನೊಂದಿಗೆ ಅವನ ಅಧೀನನಾಗಿ ಸುಖವನ್ನು ಅನುಭವಿಸುವುದೇ ಬ್ರಹ್ಮಜ್ಞಾನದ ಫಲವಾದ ಬ್ರಹ್ಮಪ್ರಾಪ್ತಿ.

ಮಂತ್ರದ ಕೊನೆಯಲ್ಲಿ 'ಇತಿ' ಎಂಬ ಶಬ್ದವಿದೆ. ಅದನ್ನು ಪ್ರಾರಂಭದಲ್ಲಿರುವ 'ಅಭ್ಯುಕ್ತಾ' ಎಂಬ ಪದದೊಂದಿಗೆ ಸೇರಿಸಿಕೊಂಡಾಗ 'ಇತಿ ಅಭ್ಯುಕ್ತಾ' ಎಂದಾಗುತ್ತದೆ. ''ಹೀಗೆ ಮಂತ್ರದಲ್ಲಿ ಹೇಳಲಾಗಿದೆ'' ಎಂದು ಅಭಿಪ್ರಾಯ. ॥ ೨ ॥

**ಸತ್ಯಮಿತ್ಯತ್ರ ಸಚ್ಛಬ್ದಃ ''ಸದ್ಭಾವೇ ಸಾಧುಭಾವೇ ಚ'' ಇತಿ ಗೀತೋಕ್ತೇಃ ''ಸದ್ಭಾವಶಬ್ದೇನ ಪ್ರಜನನಂ ಸೂಚಿತಮ್'' ಇತಿ ಗೀತಾಭಾಷ್ಯೋಕ್ತೇಶ್ಚ ಪ್ರಜನನರೂಪ ಸದ್ಭಾವ ವಾಚೀ ಇತ್ಯುಪೇತ್ಯ, ಸದ್ಭಾವಂ = ಜನ್ಮ, ಯಾಪಯತಿ ಇತಿ ।**

'ಸತ್ಯಂ' ಎಂಬ ಉಪನಿಷತ್ತಿನ ಶಬ್ದಕ್ಕೆ 'ಸದ್ಭಾವಂ ಯಾಪಯತಿ' ಎಂದು ವ್ಯುತ್ಪತ್ತಿ. ಜಗತ್ತಿಗೆ ಸದ್ಭಾವವನ್ನು ಕೊಡುವವನು ಎಂದು ಅರ್ಥ. ಸದ್ಭಾವ ಎಂದರೆ ಉತ್ಪತ್ತಿ. 'ಸದ್ಭಾವೇ ಸಾಧುಭಾವೇ ಚ' ಎಂಬ ಭಗವದ್ಗೀತೆಯಲ್ಲಿ ಸತ್ ಶಬ್ದಕ್ಕೆ ಸದ್ಭಾವ ಎನ್ನುವ ಅರ್ಥವನ್ನು ಹೇಳಲಾಗಿದೆ. ಅದಕ್ಕೆ ಆಚಾರ್ಯರು ಭಾಷ್ಯವನ್ನು ಬರೆಯುತ್ತಾ 'ಸದ್ಭಾವ ಎಂದರೆ ಉತ್ಪತ್ತಿ' ಎಂದು ಅರ್ಥವನ್ನು ಮಾಡಿದ್ದಾರೆ. ಆದ್ದರಿಂದ 'ಸತ್ಯ' ಎಂದರೆ ಸೃಷ್ಟಿಕರ್ತಾ, ಎಂದು ಅರ್ಥ.

**ಯಾತೇಃ ಅಂತರ್ಣೀತ ಣ್ಯರ್ಥಾತ್ "ಆತೋಽನುಪಸರ್ಗೇ ಕಃ' ಇತಿ ಕ ಪ್ರತ್ಯಯೇ "ಆತೋ ಲೋಪ ಇಟಿ ಚ" ಇತಿ ಆಕಾರ ಲೋಪೇ "ಅಯಸ್ಮಯಾದೀನಿ" ಇತಿ ಭಸಂಜ್ಞಾಯಾಂ ಅಪದತ್ವೇನ ಜಸ್ತ್ವ-ಅಭಾವೇ ಸತ್ಯಂ ಇತಿರೂಪಮ್ । ಉಪೇತ್ಯ ಜಗತ್ ಸ್ರಷ್ಟೃತ್ವಂ ಸತ್ಯಪದೇನ ಉಚ್ಯತೇ ಇತಿ ಅಯುಕ್ತಮ್ । ಪಂಚಮಹಾಭೂತಾನಾಮೇವ ಜಗತ್ಕಾರಣತ್ವಾತ್ ಇತ್ಯತಃ ತೇಷಾಮಪಿ ಬ್ರಹ್ಮೈವ ಕಾರಣಂ, ತದಂತರ್ಗತಂ ತತ್-ಸತ್ತಾದಿ ಪ್ರದಂ ಚ ಇತಿ ಭಾವೇನ ಸತ್ಯಪದೋಕ್ತಂ ಜಗತ್ಕಾರಣತ್ವಂ ವಿವೃಣೋತಿ - ತಸ್ಮಾದಿತ್ಯಾದಿನಾ ॥**

'ಸತ್ಯ' ಎಂಬಲ್ಲಿ 'ಸತ್ + ಯ' ಎಂದು ಎರಡು ಪದಗಳಿವೆ. ಅವುಗಳಲ್ಲಿ 'ಯ' ಎಂಬ ಶಬ್ದವು 'ಯಾ-ಪ್ರಾಪಣೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆ ಧಾತುವಿಗೆ 'ಕ' ಎಂಬ ಪ್ರತ್ಯಯವು ಬಂದಿದೆ. 'ಯಾ' ಧಾತುವಿಗೆ ಪ್ರೇರಣಾರ್ಥಕವಾದ 'ಣಿಚ್' ಪ್ರತ್ಯಯದ ಅರ್ಥವಿದೆ. (ಯಾಪಯತಿ ಇತಿ ಯಾ). ಅಂತಹ ಧಾತುವಿಗೆ ಬಂದ 'ಕ' ಪ್ರತ್ಯಯದಲ್ಲಿ 'ಅ' ಎಂದಿಷ್ಟೇ ಉಳಿಯುತ್ತದೆ. (ಯಾ + ಅ) ಧಾತುವಿನ ಆಕಾರಕ್ಕೆ 'ಆತೋ ಲೋಪ ಇಟಿ ಚ' ಸೂತ್ರದಿಂದ ಲೋಪವಾಗುತ್ತದೆ. ಸದ್ ಶಬ್ದಕ್ಕೆ 'ಭ' ಎಂಬ ಸಂಜ್ಞೆ ಇರುವುದರಿಂದಾಗಿ ಪದಸಂಜ್ಞೆ ಬರುವುದಿಲ್ಲ. ಹೀಗಾಗಿ 'ಪದಕ್ಕೆ' ಬರುವ 'ಜಸ್' ಆದೇಶವು ಬರುವುದಿಲ್ಲ. ಸತ್ + ಯ = ಸತ್ಯ

'ಸತ್ + ಯ = ಸದ್ಭಾವವನ್ನು ಕೊಡುವವನು - ಸೃಷ್ಟಿ ಮಾಡುವವನು ಎಂದರ್ಥ.

ಆದರೆ ಹೀಗೆ ಹೇಳುವುದು ಸರಿಯಲ್ಲ. ಈ ಪ್ರಪಂಚಕ್ಕೆ ಬ್ರಹ್ಮನು ಸೃಷ್ಟಿಕರ್ತನಲ್ಲ. ಪಂಚಭೂತಗಳಿಂದಲೇ ಜಗತ್ತಿನ ನಿರ್ಮಾಣವಾಗಿದೆ.

ಈ ಆಕ್ಷೇಪವನ್ನು ಮುಂದಿನ ಮಂತ್ರದಲ್ಲಿ ನಿರಾಕರಿಸಲಾಗಿದೆ. ಅಲ್ಲಿ ಹೀಗೆ ಹೇಳಲಾಗಿದೆ — ಜಗತ್ತಿಗೆ ಕಾರಣವಾದ ಪಂಚಭೂತಗಳನ್ನು ಸೃಷ್ಟಿ ಮಾಡಿದವನೂ ಪರಮಾತ್ಮನೇ. ಅಷ್ಟೆ ಅಲ್ಲ, ಅವುಗಳ ಒಳಗಿದ್ದು ಅವುಗಳನ್ನು ಉಳಿಸಿದವನೂ ಅವನೇ, ಎಂದು. ಹೀಗೆ ಸತ್ಯಪದದಿಂದ ಹೇಳಲಾದ ಸೃಷ್ಟಿ ಕಾರಣತ್ವವನ್ನು ಮುಂದಿನ ಉಪನಿಷತ್ತು ವಿವರಿಸುತ್ತದೆ.

### ಜಗತ್ಸೃಷ್ಟಿ

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇ ರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್ । ಅನ್ನಾತ್ ಪುರುಷಃ ॥೩॥**

'ಬ್ರಹ್ಮವಿದಾಪ್ನೋತಿ ಪರಂ' ಎಂದು ಈ ಉಪನಿಷತ್ತಿನ ಪ್ರಾರಂಭದಲ್ಲಿ ಪ್ರಸ್ತುತನಾದ ಹಾಗೂ 'ಸತ್ಯಂ' ಇತ್ಯಾದಿ ಪದಗಳಿಂದ ಹೇಳಲ್ಪಟ್ಟ ಗುಣಗಳುಳ್ಳ ಪರಮಾತ್ಮನಿಂದ ಭೂತಾಕಾಶ, ಅದರ ಅಭಿಮಾನಿ ದೇವತೆ, ಆ ದೇವತೆಯ ಶರೀರ, ಅದರೊಳಗೆ ನಿಯಾಮಕನಾದ ಪರಮಾತ್ಮನ ರೂಪವಿಶೇಷ ಈ ನಾಲ್ಕು ಉಂಟಾಯಿತು. ಆಕಾಶ ಪದವಾಚ್ಯವಾದ ಈ ನಾಲ್ಕರಿಂದ ಭೂತ ವಾಯು, ಅದರ ಅಭಿಮಾನಿ, ಅವನ ದೇಹ, ಅದರೊಳಗೆ ನಿಯಾಮಕನಾಗಿ ಪರಮಾತ್ಮ ಈ ನಾಲ್ಕು ಉಂಟಾಯಿತು. ಅದರಿಂದ ಅಗ್ನ್ಯಾದಿ ನಾಲ್ಕು ತತ್ತ್ವಗಳು. ಅಗ್ನಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಸಸ್ಯಗಳು. ಸಸ್ಯಗಳಿಂದ ಆಹಾರ, ಆಹಾರದಿಂದ ಜೀವಸಂಕುಲದ ದೇಹ, ಅದರೊಳಗೆ ಜೀವಿಗಳು, ಅವೆರಡ-ರೊಳಗೂ ನಿಯಾಮಕನಾದ ಭಗವಂತನ ರೂಪವಿಶೇಷ ಉಂಟಾಯಿತು.

**ತಸ್ಮಾತ್ = 'ಬ್ರಹ್ಮವಿದಾಪ್ನೋತಿ ಪರಂ' ಇತಿ ಪರಬ್ರಹ್ಮ ಪ್ರಾಪ್ತಿಕಾಮೇನ ಜ್ಞಾತವ್ಯತಯಾ ಉಕ್ತಾತ್, ಏತಸ್ಮಾತ್ = ಸತ್ಯತ್ವಾದಿನಾ ಲಕ್ಷಿತಾತ್. ಆತ್ಮನಃ ಆಕಾಶಃ, ಸಂಭೂತಃ = ಜಾತಃ ।**

**ಅತ್ರ ಪ್ರಕರಣೇ ಆಕಾಶಾದಿ ಶಬ್ದೈಃ ಭೂತಂ, ಭೂತಾಭಿಮಾನೀ, ತದ್ದೇಹಃ, ತತ್ ತ್ರಿತಯಾಂತರ್ಗತೋ ಹರಿಶ್ಚ ಇತಿ ಚತ್ವಾರಃ ಗ್ರಾಹ್ಯಾಃ । ಹರೇಃ ತತ್ ತ್ರಿತಯಾಂತರ್ಗತಿಶ್ಚ ತತ್ ಸತ್ತಾ ಶಕ್ತ್ಯಾದಿ ಪ್ರದತ್ವೇನ ಇತಿ ಜ್ಞೇಯಮ್ ।**

'ಸತ್ಯಂ' ಎಂಬ ಉಪನಿಷತ್ತಿನ ಶಬ್ದಕ್ಕೆ 'ಸದ್ಭಾವಂ ಯಾಪಯತಿ' ಎಂದು ವ್ಯುತ್ಪತ್ತಿ. ಜಗತ್ತಿಗೆ ಸದ್ಭಾವವನ್ನು ಕೊಡುವವನು ಎಂದು ಅರ್ಥ. ಸದ್ಭಾವ ಎಂದರೆ ಉತ್ಪತ್ತಿ. 'ಸದ್ಭಾವೇ ಸಾಧುಭಾವೇ ಚ' ಎಂಬ ಭಗವದ್ಗೀತೆಯಲ್ಲಿ ಸತ್ ಶಬ್ದಕ್ಕೆ ಸದ್ಭಾವ ಎನ್ನುವ ಅರ್ಥವನ್ನು ಹೇಳಲಾಗಿದೆ. ಅದಕ್ಕೆ ಆಚಾರ್ಯರು ಭಾಷ್ಯವನ್ನು ಬರೆಯುತ್ತಾ 'ಸದ್ಭಾವ ಎಂದರೆ ಉತ್ಪತ್ತಿ' ಎಂದು ಅರ್ಥವನ್ನು ಮಾಡಿದ್ದಾರೆ. ಆದ್ದರಿಂದ 'ಸತ್ಯ' ಎಂದರೆ ಸೃಷ್ಟಿಕರ್ತಾ, ಎಂದು ಅರ್ಥ.

**ಯಾತೇಃ ಅಂತರ್ಣೀತ ಣ್ಯರ್ಥಾತ್ ''ಆತೋಽನುಪಸರ್ಗೇ ಕಃ' ಇತಿ ಕ ಪ್ರತ್ಯಯೇ ''ಆತೋ ಲೋಪ ಇಟಿ ಚ'' ಇತಿ ಆಕಾರ ಲೋಪೇ ''ಅಯಸ್ಮಯಾದೀನಿ'' ಇತಿ ಭಸಂಜ್ಞಾಯಾಂ ಅಪದತ್ವೇನ ಜಸ್ತ್ವ-ಅಭಾವೇ ಸತ್ಯಂ ಇತಿರೂಪಮ್ । ಉಪೇತ್ಯ ಜಗತ್ ಸ್ರಷ್ಟೃತ್ವಂ ಸತ್ಯಪದೇನ ಉಚ್ಯತೇ ಇತಿ ಅಯುಕ್ತಮ್ । ಪಂಚಮಹಾಭೂತಾನಾಮೇವ ಜಗತ್ಕಾರಣತ್ವಾತ್ ಇತ್ಯತಃ ತೇಷಾಮಪಿ ಬ್ರಹ್ಮೈವ ಕಾರಣಂ, ತದಂತರ್ಗತಂ ತತ್-ಸತ್ತಾದಿ ಪ್ರದಂ ಚ ಇತಿ ಭಾವೇನ ಸತ್ಯಪದೋಕ್ತಂ ಜಗತ್ಕಾರಣತ್ವಂ ವಿವೃಣೋತಿ - ತಸ್ಮಾದಿತ್ಯಾದಿನಾ ॥**

'ಸತ್ಯ' ಎಂಬಲ್ಲಿ 'ಸತ್ + ಯ' ಎಂದು ಎರಡು ಪದಗಳಿವೆ. ಅವುಗಳಲ್ಲಿ 'ಯ' ಎಂಬ ಶಬ್ದವು 'ಯಾ-ಪ್ರಾಪಣೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆ ಧಾತುವಿಗೆ 'ಕ' ಎಂಬ ಪ್ರತ್ಯಯವು ಬಂದಿದೆ. 'ಯಾ' ಧಾತುವಿಗೆ ಪ್ರೇರಣಾರ್ಥಕವಾದ 'ಣಿಚ್' ಪ್ರತ್ಯಯದ ಅರ್ಥವಿದೆ. (ಯಾಪಯತಿ ಇತಿ ಯಾ). ಅಂತಹ ಧಾತುವಿಗೆ ಬಂದ 'ಕ' ಪ್ರತ್ಯಯದಲ್ಲಿ 'ಅ' ಎಂದಿಷ್ಟೇ ಉಳಿಯುತ್ತದೆ. (ಯಾ + ಅ) ಧಾತುವಿನ ಆಕಾರಕ್ಕೆ 'ಆತೋ ಲೋಪ ಇಟಿ ಚ' ಸೂತ್ರದಿಂದ ಲೋಪವಾಗುತ್ತದೆ. ಸದ್ ಶಬ್ದಕ್ಕೆ 'ಭ' ಎಂಬ ಸಂಜ್ಞೆ ಇರುವುದರಿಂದಾಗಿ ಪದಸಂಜ್ಞೆ ಬರುವುದಿಲ್ಲ. ಹೀಗಾಗಿ 'ಪದಕ್ಕೆ' ಬರುವ 'ಜಸ್' ಆದೇಶವು ಬರುವುದಿಲ್ಲ. ಸತ್ + ಯ = ಸತ್ಯ

'ಸತ್ + ಯ = ಸದ್ಭಾವವನ್ನು ಕೊಡುವವನು - ಸೃಷ್ಟಿ ಮಾಡುವವನು ಎಂದರ್ಥ.

ಆದರೆ ಹೀಗೆ ಹೇಳುವುದು ಸರಿಯಲ್ಲ. ಈ ಪ್ರಪಂಚಕ್ಕೆ ಬ್ರಹ್ಮನು ಸೃಷ್ಟಿಕರ್ತನಲ್ಲ. ಪಂಚಭೂತಗಳಿಂದಲೇ ಜಗತ್ತಿನ ನಿರ್ಮಾಣವಾಗಿದೆ.

ಈ ಆಕ್ಷೇಪವನ್ನು ಮುಂದಿನ ಮಂತ್ರದಲ್ಲಿ ನಿರಾಕರಿಸಲಾಗಿದೆ. ಅಲ್ಲಿ ಹೀಗೆ ಹೇಳಲಾಗಿದೆ — ಜಗತ್ತಿಗೆ ಕಾರಣವಾದ ಪಂಚಭೂತಗಳನ್ನು ಸೃಷ್ಟಿ ಮಾಡಿದವನೂ ಪರಮಾತ್ಮನೇ. ಅಷ್ಟೆ ಅಲ್ಲ, ಅವುಗಳ ಒಳಗಿದ್ದು ಅವುಗಳನ್ನು ಉಳಿಸಿದವನೂ ಅವನೇ, ಎಂದು. ಹೀಗೆ ಸತ್ಯಪದದಿಂದ ಹೇಳಲಾದ ಸೃಷ್ಟಿ ಕಾರಣತ್ವವನ್ನು ಮುಂದಿನ ಉಪನಿಷತ್ತು ವಿವರಿಸುತ್ತದೆ.

### ಜಗತ್‌ಸೃಷ್ಟಿ

**ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇ ರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಮ್ । ಅನ್ನಾತ್ ಪುರುಷಃ ॥೩॥**

'ಬ್ರಹ್ಮವಿದಾಪ್ನೋತಿ ಪರಂ' ಎಂದು ಈ ಉಪನಿಷತ್ತಿನ ಪ್ರಾರಂಭದಲ್ಲಿ ಪ್ರಸ್ತುತನಾದ ಹಾಗೂ 'ಸತ್ಯಂ' ಇತ್ಯಾದಿ ಪದಗಳಿಂದ ಹೇಳಲ್ಪಟ್ಟ ಗುಣಗಳುಳ್ಳ ಪರಮಾತ್ಮನಿಂದ ಭೂತಾಕಾಶ, ಅದರ ಅಭಿಮಾನಿ ದೇವತೆ, ಆ ದೇವತೆಯ ಶರೀರ, ಅದರೊಳಗೆ ನಿಯಾಮಕನಾದ ಪರಮಾತ್ಮನ ರೂಪವಿಶೇಷ ಈ ನಾಲ್ಕು ಉಂಟಾಯಿತು. ಆಕಾಶ ಪದವಾಚ್ಯವಾದ ಈ ನಾಲ್ಕರಿಂದ ಭೂತ ವಾಯು, ಅದರ ಅಭಿಮಾನಿ, ಅವನ ದೇಹ, ಅದರೊಳಗೆ ನಿಯಾಮಕನಾಗಿ ಪರಮಾತ್ಮ ಈ ನಾಲ್ಕು ಉಂಟಾಯಿತು. ಅದರಿಂದ ಅಗ್ನ್ಯಾದಿ ನಾಲ್ಕು ತತ್ತ್ವಗಳು. ಅಗ್ನಿಯಿಂದ ನೀರು, ನೀರಿನಿಂದ ಭೂಮಿ, ಭೂಮಿಯಿಂದ ಸಸ್ಯಗಳು. ಸಸ್ಯಗಳಿಂದ ಆಹಾರ, ಆಹಾರದಿಂದ ಜೀವಸಂಕುಲದ ದೇಹ, ಅದರೊಳಗೆ ಜೀವಿಗಳು, ಅವೆರಡ-ರೊಳಗೂ ನಿಯಾಮಕನಾದ ಭಗವಂತನ ರೂಪವಿಶೇಷ ಉಂಟಾಯಿತು.

**ತಸ್ಮಾತ್ = 'ಬ್ರಹ್ಮವಿದಾಪ್ನೋತಿ ಪರಂ' ಇತಿ ಪರಬ್ರಹ್ಮ ಪ್ರಾಪ್ತಿಕಾಮೇನ ಜ್ಞಾತವ್ಯತಯಾ ಉಕ್ತಾತ್, ಏತಸ್ಮಾತ್ = ಸತ್ಯತ್ವಾದಿನಾ ಲಕ್ಷಿತಾತ್. ಆತ್ಮನಃ ಆಕಾಶಃ, ಸಂಭೂತಃ = ಜಾತಃ ।**

**ಅತ್ರ ಪ್ರಕರಣೇ ಆಕಾಶಾದಿ ಶಬ್ದೈಃ ಭೂತಂ, ಭೂತಾಭಿಮಾನೀ, ತದ್ದೇಹಃ, ತತ್ ತ್ರಿತಯಾಂತರ್ಗತೋ ಹರಿಶ್ಚ ಇತಿ ಚತ್ವಾರಃ ಗ್ರಾಹ್ಯಾಃ । ಹರೇಃ ತತ್ ತ್ರಿತಯಾಂತರ್ಗತಿಶ್ಚ ತತ್ ಸತ್ತಾ ಶಕ್ತ್ಯಾದಿ ಪ್ರದತ್ವೇನ ಇತಿ ಜ್ಞೇಯಮ್ ।**

ತಸ್ಮಾತ್ = ಉಪನಿಷತ್ತಿನ ಪ್ರಾರಂಭದಲ್ಲಿ ಭಗವಂತನ ಬಳಿ ಸೇರಲು ಬಯಸುವ ಸಾಧಕನಿಂದ ತಿಳಿಯಲ್ಪಡಬೇಕಾಗಿ ಪ್ರಸ್ತುತನಾದ, ಏತಸ್ಮಾತ್ = ಸತ್ಯ-ಜ್ಞಾನ-ಅನಂತ ಎಂಬ ಲಕ್ಷಣಗಳುಳ್ಳ ಪರಮಾತ್ಮನಿಂದ ಆಕಾಶವು, ಸಂಭೂತಃ = ಹುಟ್ಟಿತು.

ಈ ಪ್ರಕರಣದಲ್ಲಿ ಆಕಾಶ, ವಾಯು ಮುಂತಾದ ಪದಗಳಿಂದ ಭೂತವಸ್ತುಗಳು, ಅದಕ್ಕೆ ಅಭಿಮಾನಿಯಾದ ಚೇತನರು, ಅವರ ದೇಹ, ಈ ಮೂರರಲ್ಲೂ ಅಂತರ್ಯಾಮಿಯಾದ ಪರಮಾತ್ಮ ಹೀಗೆ ನಾಲ್ಕನ್ನೂ ತೆಗೆದುಕೊಳ್ಳಬೇಕು. ಜಡವಾದ ವಸ್ತುಗಳು, ಅಭಿಮಾನಿದೇವತೆ, ಆ ದೇವತೆಯ ದೇಹ ಈ ಮೂರರಲ್ಲಿ ಶಕ್ತಿಯನ್ನು ತುಂಬುವುದಕ್ಕಾಗಿ ಹಾಗೂ ಅವುಗಳ ಸ್ಥಿತಿಗಾಗಿ ಪರಮಾತ್ಮನೂ ಒಂದು ರೂಪದಿಂದ ಅದರೊಳಗೆ ಸೇರುತ್ತಾನೆ.

**ಸಂಭೂತಪದೋಕ್ತಂ ಜನ್ಮ ಚ ಯಥಾಸಂಭವಂ ಹರೇಃ ಅಭಿವ್ಯಕ್ತಿಃ, ಅಭಿಮಾನಿನೋ ಅಭಿಮಾನಃ, ತದ್ದೇಹಸ್ಯ ಭೂತಸ್ಯ ಚ ಪರಿಣಾಮಃ ಇತಿ ಜ್ಞೇಯಮ್ ।**

ಈ ನಾಲ್ಕಕ್ಕೆ ಸಂಭೂತಿಃ = ಉತ್ಪತ್ತಿಯೂ ಒಂದೇ ವಿಧವಲ್ಲ. ಅವುಗಳಿಗೆ ಹೊಂದುವಂತೆ ಆ ಉತ್ಪತ್ತಿಯೂ ವಿಭಿನ್ನವಾದುದು. ಪರಮಾತ್ಮನಿಗೆ ಉತ್ಪತ್ತಿ ಎಂದರೆ ಅಭಿವ್ಯಕ್ತಿ. ಅಭಿಮಾನಿಗೆ ಆ ಜಡವಸ್ತುಗಳಲ್ಲಿ ಅಭಿಮಾನ ಉಂಟಾಗುವುದೇ ಉತ್ಪತ್ತಿ. ಅವರ ದೇಹಗಳಿಗೆ ಮತ್ತು ಭೂತವಸ್ತುಗಳಿಗೆ ಪರಿಣಾಮವೇ ಉತ್ಪತ್ತಿ. ಅಂದರೆ ದೇಹಗಳು ಪಂಚಭೂತಗಳಿಂದಲೂ ಭೂತಗಳು ಒಂದರಿಂದ ಮತ್ತೊಂದೂ ಪರಿಣಾಮಗೊಳ್ಳುತ್ತವೆ.

**ಆಕಾಶಾತ್ ಚತುರ್ವಿಧಾತ್ ಚತುರ್ವಿಧೋ ವಾಯುಃ ಸಂಭೂತಃ । ಚತುರ್ವಿಧಾತ್ ವಾಯೋಃ ಚತುರ್ವಿಧೋ ಅಗ್ನಿಃ ಸಂಭೂತಃ । ಚತುರ್ವಿಧಾದಗ್ನೇಃ ಚತುರ್ವಿಧಾಃ ಆಪಃ ಸಂಭೂತಾಃ । ಚತುರ್ವಿಧಾಭ್ಯೋ ಅದ್ಭ್ಯಃ ಚತುರ್ವಿಧಾ ಪೃಥಿವೀ ಸಂಭೂತಾ । ಚತುರ್ವಿಧಾಯಾಃ ಪೃಥಿವ್ಯಾಃ ಚತುರ್ವಿಧಾಃ ಓಷಧಯಃ ಸಂಭೂತಾಃ । ಚತುರ್ವಿಧೌಷಧೀಭ್ಯಃ ಚತುರ್ವಿಧಂ ಅನ್ನಂ ಸಂಭೂತಮ್ । ಚತುರ್ವಿಧಾದನ್ನಾತ್ ಪುರುಷಶಬ್ದಿತೋ ದೇಹಃ, ತದಭಿಮಾನೀ ಜೀವಃ, ತದುಭಯಾಂತರ್ಗತೋ ಹರಿಶ್ಚೇತಿ ತ್ರಿತಯಂ ಸಂಭೂತಮಿತಿ ಜ್ಞೇಯಮ್ ।**

ಭೂತಾಕಾಶ, ಅದರ ಅಭಿಮಾನಿದೇವತೆ, ಆ ದೇವತೆಯ ದೇಹ, ಅವುಗಳಲ್ಲಿ ನಿಯಾಮಕವಾದ ಭಗವದ್ರೂಪ ಹೀಗೆ ಆಕಾಶಪದವಾಚ್ಯವಾದ ಈ ನಾಲ್ಕರಿಂದ ವಾಯುಪದವಾಚ್ಯವಾದ ಇಂತಹ ನಾಲ್ಕು ಹುಟ್ಟುತ್ತದೆ. ಅದರಂತೆ ನಾಲ್ಕು ವಿಧ ವಾಯುವಿನಿಂದ ನಾಲ್ಕು ವಿಧದ ಅಗ್ನಿಯು ಹುಟ್ಟುತ್ತದೆ. ಅಂತಹ ನಾಲ್ಕು ವಿಧಾಗ್ನಿಯಿಂದ ನಾಲ್ಕು ವಿಧದ ನೀರು ಹುಟ್ಟುತ್ತದೆ. ನಾಲ್ಕು ವಿಧ ನೀರಿನಿಂದ ನಾಲ್ಕು ವಿಧದ ಪೃಥಿವೀ ಹುಟ್ಟುತ್ತದೆ. ನಾಲ್ಕು ವಿಧವಾದ ಪೃಥಿವಿಯಿಂದ ನಾಲ್ಕು ವಿಧದ ಸಸ್ಯಗಳು ಹುಟ್ಟುತ್ತವೆ. ಈ ನಾಲ್ಕು ಸಸ್ಯಗಳಿಂದ ನಾಲ್ಕು ವಿಧವಾದ ಅನ್ನವು ಹುಟ್ಟುತ್ತದೆ. ನಾಲ್ಕು ವಿಧವಾದ ಅನ್ನದಿಂದ ಪುರುಷ ಎನಿಸುವ ದೇಹ, ಆದರ ಅಭಿಮಾನಿಯಾದ ಜೀವಾತ್ಮ, ಅವೆರಡರ ನಿಯಾಮಕವಾದ ಭಗವದ್ರೂಪ ಈ ಮೂರು ಹುಟ್ಟುತ್ತದೆ.

**ತದಾಹ ಸೂತ್ರಕಾರಃ ''ಕಾರಣತ್ವೇನ ಚಾಕಾಶಾದಿಷು ಯಥಾ ವ್ಯಪದಿಷ್ಟೋಕ್ತೇಃ''(೧-೪-೧೫) ''ತೇಜೋತಸ್ತಥಾಹ್ಯಾಹ''(೨-೩-೧೦) ಇತಿ ಚ ।**

**ತತ್ರ ಆದ್ಯನಯೇ ಆಕಾಶಾದ್ವಾಯುರಿತ್ಯಾದೇಃ ಕಲ್ಪನೋಪದೇಶಾದಿತಿ ನ್ಯಾಯೇನ ಮುಖ್ಯವೃತ್ತ್ಯಾ ಭೂತೋತ್ಪತ್ತಿ ಪರತ್ವಂ, ಅಭಿಮಾನಿನಯನ್ಯಾಯೇನ ಅಭಿಮಾನಿ ಪರತ್ವಂ ಚೋಪೇತ್ಯ, ಸಮಾಕರ್ಷನ್ಯಾಯೇನ ಪರಮ-ಮುಖ್ಯವೃತ್ತ್ಯಾ ಆಕಾಶಾದಿ ಪುರುಷಾಂತ ಶಬ್ದಾನಾಂ ಬ್ರಹ್ಮಪರತ್ವಂ ಚ, ದ್ಯುಭ್ವಾದಿನಯ ನ್ಯಾಯೇನ ಪ್ರಾದುರ್ಭಾವಂ ಜನಿಂ ಚೋಪೇತ್ಯ ಕಾರ್ಯತ್ವೇ ಸತಿ ಕಾರಣತ್ವರೂಪ ಅವಾಂತರಕಾರಣತ್ವಸಮರ್ಥನಾತ್, ತೇಜೋನಯೇ ತೇಜಃಪದೋಪಲಕ್ಷಿತ-ಅಶೇಷಭೂತ-ತದಭಿಮಾನಿನಾಂ ಉಪಾದಾನಶಕ್ತಿ-ಕರ್ತೃತ್ವಶಕ್ತ್ಯಾದೇಃ ಈಶಾಯತ್ತತ್ವೋಕ್ತೇಃ ॥ ೩ ॥**

ತೈತ್ತಿರೀಯೋಪನಿಷತ್ತಿನ ಆಕಾಶಾದಿಪದಗಳಿಗೆ ಬ್ರಹ್ಮ ಎಂಬ ಅರ್ಥವನ್ನೂ ಮಾಡಿ ಅವನಿಗೆ ಅವಾಂತರ ಕಾರಣತ್ವವನ್ನು 'ಕಾರಣತ್ವೇನ'' ಇತ್ಯಾದಿ ಬ್ರಹ್ಮಸೂತ್ರಗಳಿಂದ ಶ್ರೀ ವೇದವ್ಯಾಸರು ಸಮರ್ಥಿಸಿದ್ದಾರೆ. ಅದರಂತೆ, 'ತೇಜೋತಃ,' ಇತ್ಯಾದಿ ಸೂತ್ರದಲ್ಲಿ ಪಂಚಭೂತಗಳೂ ಭಗವದಧೀನವಾಗಿವೆ ಎಂದೂ ತಿಳಿಸಿರುತ್ತಾರೆ.

ಮೊದಲನೆಯ ಅಧಿಕರಣದಲ್ಲಿ (ಕಾರಣತ್ವೇನ ಇತ್ಯಾದಿ ಸೂತ್ರದಲ್ಲಿ) ಹೀಗೆ ಹೇಳಲಾಗಿದೆ. —'ಆಕಾಶಾದ್ವಾಯುಃ' ಎಂಬಲ್ಲಿ ಆಕಾಶಾದಿ ಶಬ್ದಗಳಿಗೆ ಆಕಾಶ

ಮುಂತಾದ ಭೂತಗಳೂ ಅರ್ಥ. ಅದನ್ನು 'ಕಲ್ಪನೋಪದೇಶಾಚ್ಚ ಮಧ್ವಾದಿವತ್ ಅವಿರೋಧಃ'' (೧-೪-೧೧) ಎಂಬ ಬ್ರಹ್ಮಸೂತ್ರದಲ್ಲಿ ಹೇಳಲಾಗಿದೆ. ಆ ಸೂತ್ರದಲ್ಲಿ 'ಜ್ಯೋತಿಃ' ಮುಂತಾದಶಬ್ದಗಳಿಗೆ ಮುಖ್ಯವೃತ್ತ್ಯಾ ವಿಷ್ಣುವಾಚಕತ್ವವಿದ್ದರೂ ಅಮುಖ್ಯವೃತ್ತ್ಯಾ 'ಜ್ಯೋತಿಃ' ಎಂಬ ಯಾಗವೇ ಅರ್ಥ ಎಂದು ನಿರ್ಣಯಿಸಲಾಗಿದೆ. ಪ್ರಕೃತದಲ್ಲೂ ಆಕಾಶ-ವಾಯು ಮುಂತಾದ ಶಬ್ದಗಳಿಗೆ ಭೂತಾಕಾಶ, ವಾಯು ಮುಂತಾದ ಅಮುಖ್ಯಾರ್ಥವನ್ನು ಪರಿಗ್ರಹಿಸಿದಾಗ ಆಕಾಶದಿಂದ ವಾಯುವು ಹುಟ್ಟುತ್ತದೆ ಎಂದು ಒಂದು ಅರ್ಥ ಸಿಗುತ್ತದೆ.

''ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ'' (೨-೧-೬) ಎಂಬ ಬ್ರಹ್ಮಸೂತ್ರದಲ್ಲಿ 'ಮೃದಬ್ರವೀತ್'' ಎಂಬ ಶ್ರುತಿಯಲ್ಲಿ ಮೃತ್ ಎಂದರೆ ಮಣ್ಣು ಎಂದು ಅರ್ಥವಲ್ಲ, ಅದಕ್ಕೆ ಅಭಿಮಾನಿಯಾದ ದೇವತೆ ಎಂದು ಅರ್ಥ ಮಾಡಲಾಗಿದೆ. ಅದರಂತೆ ಪ್ರಕೃತ ಆಕಾಶಾದಿ ಶಬ್ದಗಳಿಗೆ ಆಕಾಶಾದಿಗಳಿಗೆ ಅಭಿಮಾನಿದೇವತೆಗಳು ಎಂದೂ ಅರ್ಥ ಹೇಳಬೇಕು. ಆಗ ಭೂತವಸ್ತುಗಳ ಜೊತೆಗೆ ಅವುಗಳಿಗೆ ಅಭಿಮಾನಿಗಳಾದ ದೇವತೆಗಳೂ ಹುಟ್ಟುತ್ತಾರೆ ಎಂಬ ಇನ್ನೊಂದು ಅರ್ಥ ಸಿಗುತ್ತದೆ.

'ಸಮಾಕರ್ಷಾತ್' (೧-೪-೧೬) ಎಂಬ ಬ್ರಹ್ಮಸೂತ್ರದಲ್ಲಿ ಪರಮ ಮುಖ್ಯ ವೃತ್ತಿಯಿಂದ ಎಲ್ಲ ಶಬ್ದಗಳೂ ವಿಷ್ಣು ವಾಚಕಗಳಾಗಿದ್ದರೂ ಅವುಗಳನ್ನು ಮುಖ್ಯವೃತ್ತಿಯಿಂದ ಲೋಕದಲ್ಲೂ ಪ್ರಯೋಗಿಸಲಾಗುತ್ತದೆ ಎನ್ನಲಾಗಿದೆ. ಈ ನ್ಯಾಯದಿಂದ ಇಲ್ಲಿರುವ ಆಕಾಶ ಮುಂತಾದ ಶಬ್ದಗಳಿಗೆ ಪರಮ ಮುಖ್ಯವೃತ್ತಿಯಿಂದ 'ವಿಷ್ಣು' ಎಂದೇ ಅರ್ಥ. ಆದ್ದರಿಂದ ಆಕಾಶನಾಮಕ ವಿಷ್ಣುವಿನಿಂದ ವಾಯು ಹುಟ್ಟುತ್ತದೆ ಎಂದೂ ಅರ್ಥವಾಗುತ್ತದೆ.

''ದ್ಯುಭ್ವಾದಿ'' ಅಧಿಕರಣದ (೧-೩-೧) ''ಪ್ರಾಣಭೃಚ್ಚ'' ಎಂಬ ಸೂತ್ರದಲ್ಲಿ ''ಬಹುಧಾ ಜಾಯಮಾನಃ'' ಎಂಬ ಉಪನಿಷತ್ತನ್ನು ವಿಷ್ಣುವಿಗೆ ಅನ್ವಯಿಸಲಾಗಿದೆ. ಅದಕ್ಕೆ ಕಾರಣ ವಿಷ್ಣುವಿಗೆ ನಮ್ಮಂತೆ ಹುಟ್ಟು (ಜಾಯಮಾನಃ) ಇಲ್ಲದಿದ್ದರೂ ಅವನಿಗೆ ಪ್ರಾದುರ್ಭಾವ ಇದೆ, ಎನ್ನುವುದು. ಅದರಂತೆ ಪ್ರಕೃತ ಆಕಾಶದಿಂದ ವಾಯು ಹುಟ್ಟಿದೆ, ಎಂದರೆ ಆಕಾಶನಾಮಕ ಪರಮಾತ್ಮನಿಂದ ವಾಯುನಾಮಕ ಪರಮಾತ್ಮನು ಆವಿರ್ಭವಿಸಿದ್ದಾನೆ ಎಂದು ಒಂದರ್ಥ. ಇನ್ನೊಂದು ಭೂತಾಕಾಶ-ದಿಂದ ಭೂತವಾಯು ಹುಟ್ಟಿದೆ ಎಂದು.

ಹೀಗೆ ಆಕಾಶಾದಿ ಶಬ್ದಗಳಿಂದ ಭಗವದ್ರೂಪಗಳೂ ವಾಚ್ಯವಾಗಿರುವುದರಿಂದ ಇಲ್ಲಿ ವಿಷ್ಣುವಿಗೆ ಅವಾಂತರಕಾರಣತ್ವವನ್ನು ಹೇಳಿದಂತಾಗಿದೆ.

ಕಾರ್ಯನೂ ಕಾರಣನೂ ಆದರೆ ಅವಾಂತರಕಾರಣ. ಆಕಾಶನಾಮಕ ವಿಷ್ಣುವಿನಿಂದ ವಾಯುನಾಮಕ ವಿಷ್ಣುವಿನ ರೂಪವು ಅಭಿವ್ಯಕ್ತಗೊಳ್ಳುತ್ತದೆ. ಆದ್ದರಿಂದ ವಾಯುರೂಪ ಕಾರ್ಯವಾಯಿತು. ಅಂತಹ ವಾಯುರೂಪದಿಂದ ಅಗ್ನಿ ಹುಟ್ಟುತ್ತದೆ. ಆಗ ವಾಯುರೂಪ ಕಾರಣವಾಯಿತು. ಹೀಗೆ ವಾಯು ಮುಂತಾದ ರೂಪಗಳು ಕಾರ್ಯ-ಕಾರಣವಾಗಿವೆ. ಆದ್ದರಿಂದ ಅವಾಂತರ ಕಾರಣವೆನಿಸಿವೆ ಎಂದು 'ಕಾರಣತ್ವೇನ ಚಾಕಾಶಾದಿಷು' ಇತ್ಯಾದಿ ಸೂತ್ರದಲ್ಲಿ ಹೇಳಲಾಗಿದೆ.

ತೇಜೋಧಿಕರಣದಲ್ಲಿ ಅಗ್ನಿ ಮುಂತಾದ ಭೂತ ವಸ್ತುಗಳು ಮತ್ತು ಅದರೊಳಗಿರುವ ಅಭಿಮಾನಿದೇವತೆಗಳಲ್ಲಿ ಇರುವ ಉಪಾದಾನತ್ವ ಸಾಮರ್ಥ್ಯ, ಕ್ರಿಯಾಶಕ್ತಿಗಳು ಪರಮಾತ್ಮನ ಅಧೀನವಾಗಿವೆ ಎಂದು ಹೇಳಲಾಗಿದೆ. ಆದ್ದರಿಂದ ಪರಮಾತ್ಮನಿಂದಲೇ ಭೂತ ವಸ್ತುಗಳೂ ಅವುಗಳ ಅಭಿಮಾನಿಗಳೂ ಹುಟ್ಟುತ್ತಾರೆ, ಎಂದು ತಿಳಿಯಬಹುದು. ಹಾಗೆಯೇ ಒಂದು ಭೂತವಸ್ತುವಿನಿಂದ ಇನ್ನೊಂದು ಭೂತವಸ್ತು ಹುಟ್ಟಿದ್ದರೂ ಆ ಭೂತಗಳಿಗೆ ಆ ಶಕ್ತಿ ಪರಮಾತ್ಮನಿಂದಲೇ ಎಂದು ತಿಳಿಯಬೇಕು. ॥ ೩ ॥

### ಅನ್ನಮಯ ಪ್ರಕರಣ

**ಸ ವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ ।**

**ಅಯಂ ದಕ್ಷಿಣಃ ಪಕ್ಷಃ । ಅಯಮುತ್ತರಃ ಪಕ್ಷಃ । ಅಯಮಾತ್ಮಾ ।**

**ಇದಂ ಪುಚ್ಛಂ ಪ್ರತಿಷ್ಠಾ ॥ ೪ ॥**

ಹಿಂದಿನ ಮಂತ್ರದಲ್ಲಿ ಪಂಚಭೂತಗಳಿಗೆ ಕಾರಣನಾಗಿ ಪ್ರಸ್ತುತನಾದ ಹಾಗೂ ಆಕಾಶಾದಿ ಪದಗಳಿಂದ ಮುಖ್ಯ ವೃತ್ತಿಯಿಂದ ವಾಚ್ಯನಾದ ಪುರುಷನಾಮಕನಾದ ಪರಮಾತ್ಮನು ಅನ್ನ ಶಬ್ದಕ್ಕೆ ಇರುವ ಅನೇಕ ಅರ್ಥಗಳಲ್ಲಿ ಪ್ರಧಾನವಾದ ಅರ್ಥದಲ್ಲಿ ''ಅನ್ನರಸಮಯ'' ಎನಿಸಿದ್ದಾನೆ. ಅನ್ನ ರಸಮಯನಾದ, ಅನ್ನ ವಿಕಾರವಾದ ಈ ದೇಹದಲ್ಲಿರುವ ಅನಿರುದ್ಧರೂಪಿ ಪರಮಾತ್ಮನ ತಲೆಯು ಈ ದೇಹದ ತಲೆಯ ಒಳಭಾಗದಲ್ಲಿದೆ. ಈ ದೇಹದ ಬಲಕೈ ಒಳಗೆ ಅವನ ಬಲಕೈ ಇದೆ. ಎಡಕೈ ಒಳಗೆ

ಎಡಕ್ಕೈ ಇದೆ. ಈ ದೇಹದ ಮಧ್ಯಭಾಗದಲ್ಲಿ ಅವನ ಮಧ್ಯ ಭಾಗವಿದೆ. ಈ ಕಾಲುಗಳ ಒಳಗೆ ಅವನ ಕಾಲುಗಳಿವೆ.

**ಏವಂ ಸತ್ಯಪದೋಕ್ತಂ ಜಗಜ್ಜನ್ಮಹೇತುತ್ವಂ ಆತ್ಮನಃ ಇತ್ಯಾದಿ ಪ್ರಕರಣೇನ ಸಮರ್ಥ್ಯ "ಅಸ್ತಿ ಚೈತ್ರಃ" ಇತ್ಯುಕ್ತೇ ಜೀವತೀತಿ ಪ್ರತೀತೇಃ ಅಸ್ತೇಃ ಶತ್ರಂತಸ್ಯ ಸದಿತಿ ರೂಪಂ ಉಪೇತ್ಯ, ಸತ್ವಂ = ಜೀವನಂ ಯಾಪಯತೀತಿ, 'ಷದ್‌ಲೃ ವಿಶರಣಗತಿ, ಇತಿ ಧಾತೋಃ ಭಾವೇ ಕ್ವಿಬಂತತ್ವಮುಪೇತ್ಯ ಸದ್ಗತಿಂ ವಿಶೀರ್ಣತ್ವಂ ಚ ಯಾಪಯತಿ ಇತಿ ಚ ವ್ಯುತ್ಪತ್ಯಾಶ್ರಯೇಣ ಉಕ್ತಂ ಅನ್ಯದರ್ಥತ್ರಯಂ, ಜ್ಞಾನತ್ವ-ಅನಂತತ್ವರೂಪಲಕ್ಷಣ ದ್ವಯಂ ಚ ವಿವರಿತುಂ ಪುರುಷಪದೇನ ಪರಮಮುಖ್ಯವೃತ್ತ್ಯಾ ಉಕ್ತಸ್ಯ ಜೀವದೇಹಸ್ಥಸ್ಯ ಹರೇಃ ಜೀವದೇಹೇ ಪಂಚರೂಪತಯಾ ಸ್ಥಿತಿಂ ವಕ್ತುಂ ಪ್ರಕರಣಾಂತರಂ ಆರಭತೇ — ಸ ವಾ ಏಷ ಪುರುಷ ಇತಿ ॥**

ಹೀಗೆ 'ಆತ್ಮನಃ ಆಕಾಶಃ ಸಂಭೂತಃ" ಎಂಬ ಮೊದಲ ಪ್ರಕರಣದಲ್ಲಿ 'ಸತ್ಯ' ಪದದ ಒಂದು ಅರ್ಥವಾದ "ಜಗತ್ಕರ್ತೃತ್ವ"ವನ್ನು ಸಮರ್ಥಿಸಲಾಯಿತು. ಸತ್ಯಪದಕ್ಕೆ ಇನ್ನೊಂದು ಅರ್ಥ "ಜಗತ್ತಿಗೆ ಜೀವನವನ್ನು ಕೊಡುವವನು". "ಚೈತ್ರನು ಇದ್ದಾನೆ (ಅಸ್ತಿ) ಎಂದರೆ ಅವನು ಜೀವಿಸಿದ್ದಾನೆ ಎಂದರ್ಥ. 'ಅಸ್ತಿ' ಎಂಬ ಕ್ರಿಯಾಪದದ ಮೂಲರೂಪ "ಅಸ್" ಎಂಬ ಧಾತು. ಅದಕ್ಕೆ 'ಶತೃ' ಪ್ರತ್ಯಯ ಸೇರಿದರೆ 'ಸತ್' ಎಂಬ ರೂಪವಾಗುತ್ತದೆ. 'ಸತ್ಯ' ಪದವನ್ನು 'ಸತ್+ಯ' ಎಂದು ಒಡೆದಾಗ ಅಲ್ಲಿರುವ 'ಸತ್' ಶಬ್ದಕ್ಕೆ 'ಜೀವನ' ಎಂದೇ ಅರ್ಥ. 'ಯ' ಎಂದರೆ "ಯಾಪಯತಿ = ಕೊಡುತ್ತಾನೆ". ಒಟ್ಟಿನಲ್ಲಿ ಜಗತ್ತಿಗೆ ಜೀವನ (ಸ್ಥಿತಿ) ವನ್ನು ಕೊಡುವವನು 'ಸತ್ಯ'.

ಅದರಂತೆ ಸದ್ಗತಿಯನ್ನೂ, ನಾಶವನ್ನೂ ಮಾಡುವವನು, ಎನ್ನುವ ಅರ್ಥವೂ 'ಸತ್ಯ' ಪದಕ್ಕೆ ಇದೆ. 'ಷದ್‌ಲೃ' ಧಾತುವಿಗೆ 'ನಾಶ-ಗತಿ(ಸದ್ಗತಿ)' ಎಂದು ಎರಡೂ ಅರ್ಥ. ಆ ಧಾತುವಿಗೆ 'ಕ್ವಿಪ್' ಪ್ರತ್ಯಯ ಬಂದರೆ 'ಸತ್' ಎಂಬ ಶಬ್ದವಾಗುತ್ತದೆ. ಸತ್ = ಸದ್ಗತಿಯನ್ನು ಮತ್ತು ಸಂಹಾರವನ್ನು, ಯಾಪಯತಿ = ಉಂಟುಮಾಡುವವನು 'ಸತ್ಯ'. ಹೀಗೆ ಈ ಮೂರು ಲಕ್ಷಣಗಳನ್ನೂ ಜ್ಞಾನ, ಅನಂತ ಪದಗಳಿಂದ ಹೇಳಿದ ಇನ್ನೆರಡು ಲಕ್ಷಣಗಳನ್ನು, ಒಟ್ಟು ಐದು ಲಕ್ಷಣಗಳನ್ನು ಮುಂದಿನ ಐದು ಪ್ರಕರಣಗಳಲ್ಲಿ ಸಮರ್ಥಿಸಲಾಗಿದೆ. ಅದರಂತೆ "ಅನ್ನಾತ್ ಪುರುಷಃ" ಎಂದು ಪುರುಷ ಶಬ್ದದಿಂದ ಪ್ರಸ್ತುತನಾದ ಪರಮಾತ್ಮನು ಜೀವನ ದೇಹದಲ್ಲಿ ಐದು ರೂಪದಿಂದ ಸನ್ನಿಹಿತನಾಗಿದ್ದಾನೆ ಎನ್ನುವುದನ್ನೂ ಈ ಮುಂದಿನ ಐದು ಪ್ರಕರಣಗಳಲ್ಲಿ ತಿಳಿಸಲಾಗಿದೆ.

**ಸಃ = ಆತ್ಮನಃ ಇತಿ ಸರ್ವಭೂತ ಮೂಲಕಾರಣತಯಾ ಉಕ್ತಃ, ವೈ = ಪ್ರಸಿದ್ಧಃ, ಏಷಃ = ಆಕಾಶಾದಿ ಪದೈಃ ಮುಖ್ಯತಯಾ ಪ್ರಕೃತಃ, ಪುರುಷಃ = ಜೀವದೇಹಸ್ಥಃ ಪುರುಷನಾಮಾ ಹರಿಃ, ಅನ್ನ ರಸ ಮಯಃ ।**

ಉಪನಿಷತ್ತಿನ ಪದಗಳ ಅರ್ಥ — ಸಃ = ''ಆತ್ಮನಃ ಆಕಾಶಃ ಸಂಭೂತಃ'' ಎಂಬ ಹಿಂದಿನ ಪ್ರಕರಣದಲ್ಲಿ ಪಂಚಭೂತಗಳಿಗೆ ಮೂಲಕಾರಣನಾಗಿ ಪ್ರಸ್ತುತ-ನಾದ, ವೈ= ಪ್ರಸಿದ್ಧನಾದ, ಏಷಃ = ಆಕಾಶ, ವಾಯು ಪದಗಳ ಮುಖ್ಯಾರ್ಥನಾಗಿ ಪ್ರಸ್ತುತನಾದ, ಪುರುಷಃ = ಜೀವರ ದೇಹದಲ್ಲಿದ್ದು ಪುರುಷನೆಂದು ಕರೆಸಿಕೊಳ್ಳುವ ಶ್ರೀ ಹರಿಯು, ಅನ್ನರಸಮಯಃ = ಅನ್ನಶಬ್ದಕ್ಕೆ ಇರುವ ಅನೇಕ ಅರ್ಥಗಳಲ್ಲಿ ಸಾರವಾದ ಅರ್ಥವನ್ನು ಪಡೆದವನಾಗಿದ್ದಾನೆ.

**ಮಯಟ್ ಪ್ರಾಚುರ್ಯಾರ್ಥಃ । ''ತಾದಾತ್ಮ್ಯಾರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ ತ್ರಿಧಾ'' ಇತ್ಯುಕ್ತೇಃ ।**

ಅನ್ನಮಯ ಎಂಬಲ್ಲಿ ಮಯಟ್ ಪ್ರತ್ಯಯ ಇದೆ. ಅದಕ್ಕೆ ಪೂರ್ಣ ಎಂದು ಅರ್ಥ. ವಿಕಾರ ಎಂದು ಅರ್ಥವಲ್ಲ. ಪೂರ್ಣ ಎಂಬ ಅರ್ಥದಲ್ಲೂ ಮಯಟ್ ಪ್ರತ್ಯಯವನ್ನು ವಿಧಾನ ಮಾಡಲಾಗಿದೆ.

**ಅನ್ನಶಬ್ದಃ ಅತ್ರ 'ಅದ್ಯತೇ ಅತ್ತಿ ಚ' ಇತಿ ವಾಕ್ಯಶೇಷಾತ್ 'ಅದ ಭಕ್ಷಣೇ' ಇತ್ಯತಃ ಕರ್ಮಣಿ ಕರ್ತರಿ ವಾ ನಿಷ್ಠಾಪ್ರತ್ಯಯೇ ''ರದಾಭ್ಯಾಂ ನಿಷ್ಠಾತೋ ನಃ'' ಇತಿ ನಿಷ್ಠಾತಕಾರಸ್ಯ ನತ್ವೇ 'ಅನ್ನಂ' ಇತಿ ಸಿದ್ಧ್ಯಾ ಭೂತೋಪಜೀವ್ಯತ್ವರೂಪ - ಅದ್ಯತ್ವ, ಭೂತಾತ್ತೃತ್ವರೂಪ ಸಂಹರ್ತೃತ್ವ ಪರಃ ।**

**ರಸ ಶಬ್ದಃ ಸಾರವಾಚೀ । ''ರಸಃ ಸಾರೋ ವರಶ್ಚೇತಿ ಶಬ್ದಾಃ ಪರ್ಯಾಯ ವಾಚಕಾಃ'' ಇತ್ಯುಕ್ತೇಃ ।**

**ತಥಾಚ, ಅನ್ನೇಷು - ಅನ್ನಶಬ್ದಾರ್ಥೇಷು, ರಸಃ = ಸಾರಃ, ಅನ್ನರಸಃ । ತತ್ಪ್ರಚುರೋ ಅನ್ನರಸಮಯಃ । ಸರ್ವಭೂತೋಪಜೀವ್ಯತ್ವೇನ, ಸರ್ವಭೂತ-ಸಂಹರ್ತೃತ್ವೇನ ಚ ನಿಮಿತ್ತೇನ ಅನ್ನರಸಮಯ ಶಬ್ದವಾಚ್ಯಃ, ಪ್ರಾಕೃತಾನ್ನ ವಿಕಾರ ದೇಹಸ್ಥೋ ಅನಿರುದ್ಧಃ ಇತ್ಯರ್ಥಃ ।**

ಅನ್ನರಸಮಯ ಶಬ್ದದಲ್ಲಿರುವ ಅನ್ನಶಬ್ದಕ್ಕೆ ಅರ್ಥವನ್ನು ಇದೇ ಪ್ರಕರಣದಲ್ಲಿ ''ಅದ್ಯತೇ ಅತ್ತಿ ಚ ಭೂತಾನಿ'' ಎಂದು ಹೇಳಲಾಗಿದೆ. ಭಕ್ಷಣಾರ್ಥದಲ್ಲಿರುವ 'ಅದ' ದಾತುವಿನಿಂದ 'ಅನ್ನ' ಎಂಬ ಶಬ್ದವು ನಿಷ್ಪನ್ನವಾಗಿದೆ. ಆ ಧಾತುವಿಗೆ ಕರ್ಮ

ಅಥವಾ ಕರ್ತೃ ಎಂಬ ಅರ್ಥದಲ್ಲಿ 'ಕ್ತ' ಎಂಬ ಪ್ರತ್ಯಯ ಬಂದಿದೆ. 'ರದಾಭ್ಯಾಂ'' ಇತ್ಯಾದಿ ಪಾಣಿನಿ ಸೂತ್ರದಿಂದ 'ಕ್ತ' ಎಂಬ ಪ್ರತ್ಯಯದ ತಕಾರಕ್ಕೆ ನಕಾರ ಬಂದಿದೆ. ''ಅದ್ + ನ' = ಅನ್ನ. ಪ್ರಾಣಿಗಳಿಗೆ ಜೀವನ ಪ್ರದ ಎಂದೂ (ಕರ್ಮಣಿ ಕ್ತಃ) ಪ್ರಾಣಿಗಳ ಸಂಹಾರಕ (ಕರ್ತರಿ ಕ್ತಃ) ಎಂದೂ ಅರ್ಥ.

'ರಸ' ಶಬ್ದಕ್ಕೆ ಸಾರ ಎಂದು ಅರ್ಥ. ''ರಸ, ಸಾರ, ವರ ಈ ಶಬ್ದಗಳು ಪರ್ಯಾಯಗಳು'' ಎಂದು ಪ್ರಮಾಣವಿದೆ.

ಒಟ್ಟಿನಲ್ಲಿ 'ಅನ್ನೇಷು ರಸಃ = ಅನ್ನರಸಃ' ಅನ್ನೇಷು = ಅನ್ನಶಬ್ದಕ್ಕಿರುವ ಅನೇಕ ಅರ್ಥಗಳಲ್ಲಿ, ರಸಃ = ಸಾರಭೂತವಾದ ಅರ್ಥವನ್ನು ಹೊಂದಿದವನು 'ಅನ್ನರಸ'. ಆ ಅರ್ಥವು ಇನ್ನಾರಲ್ಲೂ ಇಲ್ಲದಷ್ಟು ಪರಮಾತ್ಮನಲ್ಲಿ ಇದೆ. ಆದ್ದರಿಂದ ಅವನು 'ಅನ್ನರಸಮಯ'.

ಹೀಗೆ ಸಕಲ ಭೂತಗಳಿಗೆ ಜೀವನ ಪ್ರದನಾದುದರಿಂದಲೂ, ಸಂಹಾರಕರ್ತನಾದುದರಿಂದಲೂ ಅನ್ನರಸಮಯ ಶಬ್ದದಿಂದ ವಾಚ್ಯನಾಗಿ, ಪ್ರಾಕೃತ ಅನ್ನವಿಕಾರವಾದ ಈ ದೇಹದಲ್ಲಿರುವವನು 'ಅನಿರುದ್ಧ' ಎಂದರ್ಥ.

**ಅನ್ನಪದಸ್ಯ ಪ್ರಾಕೃತಾನ್ನ ಪರತ್ವ ನಿವೃತ್ತ್ಯರ್ಥಂ ಅನ್ನಮಯ ಇತ್ಯನುಕ್ತ್ವಾ ಅನ್ನರಸಮಯ ಇತ್ಯುಕ್ತಮ್ ।**

**ಏತೇನ ಸ ವಾ ಏಷ ಪುರುಷಃ ಸರ್ವಾದ್ಯತ್ವ, ಸರ್ವಾತೃತ್ವರೂಪ ಸರ್ವೋಪಜೀವ್ಯತ್ವ ಸರ್ವಸಂಹರ್ತೃತ್ವಾಭ್ಯಾಂ ನಿಮಿತ್ತಾಭ್ಯಾಂ ಅನ್ನರಸಮಯಃ ಇತಿ ಕಥನೇನ ಸತ್ಯಪದಸ್ಯ ಸರ್ವ ಜೀವನಹೇತುತ್ವ - ಸರ್ವಸಂಹರ್ತೃತ್ವರೂಪ - ಅರ್ಥದ್ವಯಮಪಿ ವಿವೃತಂ ಧ್ಯೇಯಮ್ ।**

ಅನ್ನ ಪದಕ್ಕೆ ನಾವು ಉಣ್ಣುವ ಅನ್ನ ಎನ್ನುವ ಅರ್ಥ ಮಾಡಬಾರದು ಎಂದು ತಿಳಿಸಲು ''ಅನ್ನಮಯ'' ಎಂದು ಹೇಳದೆ 'ಅನ್ನರಸಮಯ' ಎನ್ನಲಾಗಿದೆ.

ಹೀಗೆ, ಹಿಂದೆ ಪುರುಷ ಶಬ್ದದಿಂದ ಪ್ರಸ್ತುತನಾದ ಪರಮಾತ್ಮನು ಸರ್ವರಿಂದಲೂ 'ಅದ್ಯ' ನಾದುದರಿಂದ ಅಂದರೆ ಎಲ್ಲರಿಗೂ ಆಸರೆ-ಯಾದುದರಿಂದ ಹಾಗೂ ಸರ್ವರನ್ನೂ 'ಅತ್ತೃ' ಆದುದರಿಂದ ಅಂದರೆ ಸಕಲ ಸಂಹಾರಕನಾದುದರಿಂದ ಅನ್ನರಸಮಯ ಎನಿಸಿದ್ದಾನೆ ಎಂದಂತಾಯಿತು. ಈ ಮೂಲಕ ಸತ್ಯಪದದ ಎರಡು ಅರ್ಥಗಳನ್ನೂ - ೧. ಎಲ್ಲರ ಜೀವನ ಕಾರಣತ್ವ ೨. ಸಕಲ ಸಂಹಾರಕತ್ವ - ವಿವರಿಸಿದಂತಾಯಿತು.

**ಅನ್ನಮಯ ಕೋಶಸ್ಥಸ್ಯ ಅನಿರುದ್ಧಸ್ಯ ಅನ್ನರಸಮಯ ಶಬ್ದವಾಚ್ಯಸ್ಯ ಶಿರಃ ಪ್ರಭೃತಿ ಅವಯವಾನಾಂ ಕೋಶ ಶಿರಃ ಪ್ರಭೃತಿ ಅವಯವಾಃ ಏವ ಸ್ಥಾನಾನಿ ಇತ್ಯಾಹ — ತಸ್ಯೇದಮೇವ ಶಿರ ಇತಿ ॥**

**ಪ್ರಾಕೃತಾನ್ನವಿಕಾರ-ಶರೀರ ಶಿರ ಏವ ತಸ್ಯ ಶಿರ ಇತ್ಯರ್ಥಃ । ದೃಶ್ಯಮಾನ ಜೀವ ದೇಹ ಶಿರಾಂತಸ್ಥತ್ವೇನ ತದಾವೃತತಯಾ ಸ್ಥಿತತ್ವಾತ್ ಹರೇಃ ಶಿರಸಃ ವಸ್ತ್ರಾವೃತ ಜಾನುನಿ 'ಇದಂ ಜಾನು' ಇತಿ ನಿರ್ದೇಶವತ್ ಉಪಚಾರೇಣ ಅಯಂ ನಿರ್ದೇಶಃ । ಏವಮಗ್ರೇಽಪಿ ಜ್ಞೇಯಮ್ ।**

ಈ ದೇಹವೇ ಅನ್ನಮಯಕೋಶ. ಅದರೊಳಗಿರುವ ಪರಮಾತ್ಮನ ರೂಪ ಅನಿರುದ್ಧ. ಅವನಿಗೆ ಅನ್ನರಸಮಯ ಎಂದು ಹೆಸರು. ಆ ಪರಮಾತ್ಮನ ತಲೆ ಮುಂತಾದ ಅವಯವಗಳು ಈ ದೇಹದ ತಲೆ ಮುಂತಾದ ಅವಯವಗಳ ಒಳಗೆ ಇವೆ. ಈ ವಿಷಯವನ್ನು ''ತಸ್ಯೇದಮೇವ ಶಿರಃ'' ಇತ್ಯಾದಿ ಉಪನಿಷತ್ತು ಹೇಳುತ್ತದೆ. ಅದರ ಅರ್ಥ-ಪ್ರಾಕೃತವಾದ ಅನ್ನದಿಂದಾದ ಈ ದೇಹದ ತಲೆಯೇ ಅನಿರುದ್ಧನ ತಲೆಯಾಗಿದೆ. ವಸ್ತುತಃ ನಮ್ಮ ತಲೆಯೇ ದೇವರ ತಲೆಯಲ್ಲ. ಅವನ ತಲೆ ಈ ತಲೆಯ ಒಳಗಿದೆ. ಆದರೂ ನಮ್ಮ ತಲೆಯೇ ಅವನ ತಲೆ ಎನ್ನುವುದು ಬಟ್ಟೆಯ ಒಳಗಿರುವ ಕಾಲನ್ನು ಬಟ್ಟೆಯನ್ನು ತೋರಿಸಿ 'ಇದೇ ನನ್ನ ಕಾಲು' ಎಂದಂತೆ. ಈ ವ್ಯವಹಾರ ಗೌಣವಾದುದು. ಮುಂದೆಯೂ ಹೀಗೆಯೇ ತಿಳಿಯಬೇಕು.

**ಅಯಂ = ದೃಶ್ಯಮಾನ-ಅನ್ನವಿಕಾರ-ದೇಹಸಂಬಂಧೀ, ದಕ್ಷಿಣಃ ಪಕ್ಷಃ = ದಕ್ಷಿಣಬಾಹುಃ । ಅನ್ನರಸಮಯಸ್ಯ ಅನಿರುದ್ಧಸ್ಯ ದಕ್ಷಿಣಬಾಹುಃ ತದಂತಃ ಅಸ್ತಿ ಇತ್ಯರ್ಥಃ ।**

**ಅಯಂ ಉತ್ತರಃ ಪಕ್ಷಃ = ಪರಿದೃಶ್ಯಮಾನ ದೇಹಸಂಬಂಧೀ, ಉತ್ತರಃ ಪಕ್ಷಃ = ವಾಮಬಾಹುಃ । ಅನ್ನರಸಮಯಸ್ಯ ಅನಿರುದ್ಧಸ್ಯ ವಾಮಬಾಹುಃ ತದಂತಃ ವರ್ತತೇ ಇತ್ಯರ್ಥಃ ।**

**ಅಯಂ, ಆತ್ಮಾ = ಮಧ್ಯದೇಹಃ, ಜೀವದೇಹ ಮಧ್ಯದೇಹಃ ತಸ್ಯ ಮಧ್ಯದೇಹಃ ।**

ಅಯಂ ಎಂದರೆ ಪ್ರತ್ಯಕ್ಷವಾದ, ಅನ್ನದಿಂದ ಬೆಳೆದ ಈ ದೇಹಕ್ಕೆ ಸಂಬಂಧಿಸಿದ ಎಂದು ಅರ್ಥ. ದಕ್ಷಿಣಃ ಪಕ್ಷಃ ಎಂದರೆ ಬಲಕೈ. ಒಟ್ಟಿನಲ್ಲಿ ಅನ್ನರಸಮಯನೆನಿಸಿದ ಅನಿರುದ್ಧನ ಬಲಕೈ ನಮ್ಮ ಬಲಕೈಯ ಒಳಗಿದೆ ಎಂದು ಅರ್ಥ.

ಅಯಂ = ಪ್ರತ್ಯಕ್ಷವಾದ ಈ ದೇಹದ ಎಡಕೈಯೆ, ಉತ್ತರಃ ಪಕ್ಷಃ = ಅನಿರುದ್ಧನ ಎಡಗೈ. ಅನ್ನರಸಮಯನೆನಿಸಿರುವ ಅನಿರುದ್ಧನ ಎಡಗೈ ನಮ್ಮ ಎಡಗೈಯ ಒಳಗಿದೆ ಎಂದು ಅರ್ಥ.

ಅಯಂ, ಆತ್ಮಾ = ಮಧ್ಯದೇಹವು. ಜೀವನ ದೇಹದ ಮಧ್ಯಭಾಗವು ಅನಿರುದ್ಧನ ಮಧ್ಯದೇಹ.

**ಇದಂ ಪುಚ್ಛಂ, ತಸ್ಯ ವಿವರಣಂ – ಪ್ರತಿಷ್ಠೇತಿ ॥ ಪ್ರತಿತಿಷ್ಠತಿ ಆಭ್ಯಾಂ ಇತಿ ಪ್ರತಿಷ್ಠೌ = ಪಾದೌ । "ಸುಪಾಂ ಸು ಲುಕ್" ಇತ್ಯಾದಿನಾ ದ್ವಿವಚನಸ್ಯ ಆಕಾರಾದೇಶಃ । ಜೀವದೇಹಪಾದಯೋಃ ಅಸ್ಯ ಪಾದೌ ವರ್ತೇತೇ ಇತ್ಯರ್ಥಃ । ಅನ್ನವಿಕಾರದೇಹಃ, ತದವಯವಾಶ್ಚ ಅನಿರುದ್ಧಾಧೀನಾಃ ಇತಿ ಭಾವಃ ॥ ೪ ॥**

'ಇದಂ ಪುಚ್ಛಂ' ಎನ್ನುವುದರ ವಿವರಣೆ 'ಪ್ರತಿಷ್ಠಾ' ಎಂದು. ಪ್ರತಿ+ತಿಷ್ಠತಿ = ಪ್ರತಿಷ್ಠಾ. ಯಾವುದರ ಆಧಾರದಿಂದ ಈ ದೇಹವು ನಿಲ್ಲುವುದೋ ಅಂತಹ ಕಾಲುಗಳೆರಡು ಪ್ರತಿಷ್ಠಾ. 'ಪ್ರತಿಷ್ಠೌ' ಎನ್ನುವ ದ್ವಿವಚನಕ್ಕೆ 'ಸುಪಾಂ ಸು ಲುಕ್' ಎಂಬ ಸೂತ್ರದಂತೆ ಆಕಾರಾದೇಶ ಬಂದಿದೆ.

ಜೀವರ ದೇಹದ ಕಾಲುಗಳೊಳಗೆ ಅನಿರುದ್ಧನ ಕಾಲುಗಳು ಇವೆ. ಒಟ್ಟಿನಲ್ಲಿ ಅನ್ನದಿಂದ ಬೆಳೆದ ಈ ದೇಹ, ಅದರ ಅವಯವಗಳು ಇವೆಲ್ಲ ಅನಿರುದ್ಧನ ಅಧೀನವಾಗಿವೆ, ಎಂದು ಭಾವ ॥ ೪ ॥

**ಸತ್ಯಪದಸ್ಯ ಜಗಜ್ಜನ್ಮ -ಸ್ಥಿತಿ-ಲಯ-ಗತಿ ಹೇತುತ್ವಂ ಅರ್ಥಂ ಉಪೇತ್ಯ ಜಗಜ್ಜನ್ಮಹೇತುತ್ವಂ "ಆತ್ಮನ ಆಕಾಶಃ" ಇತ್ಯಾದಿನಾ ಅನ್ಯದರ್ಥದ್ವಯಂ "ಸ ವಾ ಏಷ" ಇತ್ಯಾದಿನಾ ಚ ವ್ಯಾಖ್ಯಾತಮ್ । ತಸ್ಮಿನ್ನರ್ಥತ್ರಯೇ ಶ್ಲೋಕ-ಮುದಾಹರತಿ ಉಪನಿಷತ್ – ಪದಪ್ಯೇಷ ಶ್ಲೋಕ ಇತ್ಯಾದಿನಾ ॥**

ಸತ್ಯ ಪದಕ್ಕೆ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ಪ್ರವೃತ್ತಿ ಕಾರಣ ಎಂಬ ಅರ್ಥವನ್ನು ಅಭಿಪ್ರಾಯದಲ್ಲಿ ಇಟ್ಟುಕೊಂಡು ಅವುಗಳಲ್ಲಿ ಉತ್ಪತ್ತಿ ಕಾರಣತ್ವವನ್ನು "ಆತ್ಮನ ಆಕಾಶಃ ಸಂಭೂತಃ" ಎಂಬ ಮೊದಲ ಪ್ರಕರಣದಲ್ಲಿ ವಿವರಿಸಲಾಯಿತು. ಸ್ಥಿತಿ-ಲಯ ಕಾರಣತ್ವವನ್ನು "ಸ ವಾ ಏಷ ಪುರುಷಃ" ಎಂಬ ಅನ್ನಮಯ ಪ್ರಕರಣದಲ್ಲಿ ಹೇಳಲಾಯಿತು. ಈ ವಿಷಯದಲ್ಲಿ ಛಂದೋಬದ್ಧವಾದ ಮಂತ್ರವೊಂದನ್ನು ಉಪನಿಷತ್ತು "ತದಪ್ಯೇಷಃ" ಎಂದು ಉದಾಹರಿಸುತ್ತಿದೆ.

**ತದಪ್ಯೇಷ ಶ್ಲೋಕೋ ಭವತಿ ।**

**ಅನ್ನಾದ್ ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಂಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿ ಯಂತ್ಯಂತತಃ । ಅನ್ನಂಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ ಸರ್ವೌಷಧ ಮುಚ್ಯತೇ । ಸರ್ವಂ ವೈ ತೇಽನ್ನಮಾಪ್ನುವಂತಿ । ಯೇಽನ್ನಂ ಬ್ರಹ್ಮೋ ಪಾಸತೇ । ಅನ್ನಂಹಿ ಭೂತಾನಾಂ ಜ್ಯೇಷ್ಠಮ್ । ತಸ್ಮಾತ್ ಸರ್ವೌಷಧ ಮುಚ್ಯತೇ । ಅನ್ನಾದ್ ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇಽತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ ॥ ೫ ॥**

ಅನ್ನಮಯನ ವಿಷಯದಲ್ಲಿ ಹೀಗೊಂದು ಶ್ಲೋಕವಿದೆ. ಅನ್ನರಸಮಯನಾದ ಅನಿರುದ್ಧನಿಂದ ಈ ಭೂಮಿಯಲ್ಲಿರುವ ಚೇತನರು ದೇಹಸಂಬದ್ಧರಾಗಿ ಹುಟ್ಟುತ್ತಾರೆ. ಹುಟ್ಟಿದವರೆಲ್ಲ ಅವನಿಂದಾಗಿಯೇ ಪ್ರಾಣಧಾರಣೆ ಮಾಡುತ್ತಿದ್ದಾರೆ. ಪ್ರಲಯ ಕಾಲದಲ್ಲಿ ಅವನ ಹೊಟ್ಟೆಯೊಳಗೇ ಸೇರಿಕೊಳ್ಳುತ್ತಾರೆ. ಈ ಅನಿರುದ್ಧನು ಎಲ್ಲ ಚೇತನರಿಗಿಂತಲೂ ಶ್ರೇಷ್ಠನಾಗಿರುವುದರಿಂದಲೇ ಸಾಂಸಾರಿಕ ದುಃಖದಿಂದ ಬಸವಳಿದವರಿಗೆ ಆಶ್ರಯನಾಗಿದ್ದಾನೆ.

ಯಾರು ಈ ಅನ್ನರಸಮಯನಾದ ಅನಿರುದ್ಧನನ್ನು ಗುಣಪೂರ್ಣನೆಂದು ಉಪಾಸನೆ ಮಾಡುತ್ತಾರೋ ಅವರು ಪೂರ್ಣನಾದ ಅವನ ಬಳಿ ಸೇರುತ್ತಾರೆ.

ಈ ಅನಿರುದ್ಧನು ಸರ್ವೋತ್ತಮನಾದುದರಿಂದ ಭವಭಯ ನಿವರ್ತಕನಾಗಿದ್ದಾನೆ.

ಈ ಅನ್ನನಾಮಕನಾದ ಅನಿರುದ್ಧನಿಂದಲೇ ಎಲ್ಲರೂ ಹುಟ್ಟುತ್ತಾರೆ. ಹುಟ್ಟಿದವರು ಅವನಿಂದಲೇ ಬೆಳೆಯುತ್ತಾರೆ. ಎಲ್ಲ ಪ್ರಾಣಿಗಳಿಂದಲೂ

ಆಶ್ರಯಿಸಲ್ಪಡುವುದರಿಂದಲೂ ಎಲ್ಲರಿಗೂ ಸಂಹಾರಕನಾದುದರಿಂದಲೂ ಅನಿರುದ್ಧನು ಅನ್ನ ಎನಿಸಿದ್ದಾನೆ.

**ತತ್= ತತ್ರ, ಉಕ್ತೇಽರ್ಥೇ ಏಷಃ ಶ್ಲೋಕೋಽಪಿ ಭವತಿ । ತಮೇವ ಉದಾಹರತಿ - ಅನ್ನಾದ್ವಾ ಇತ್ಯಾದಿನಾ ॥ ನಾಮ್ನೈಕದೇಶೇ ನಾಮಗ್ರಹಣಂ, ಅನ್ನರಸಮಯಾದ್ವಾ ಇತ್ಯರ್ಥಃ । ಭೌತಿಕಾನ್ನ ವಿಕಾರದೇಹಸ್ಥಾತ್ ಅನಿರುದ್ಧಾತ್ ಪ್ರಜಾಃ ದೇಹಯೋಗೇನ ಜಾಯಂತೇ ಇತ್ಯರ್ಥಃ । ಅಥೋ = ಜಾತಾಶ್ಚ ಪ್ರಜಾಃ ಅನ್ನರಸಮಯೇನ, ಜೀವಂತಿ = ಪ್ರಾಣಾನ್ ಬಿಭ್ರತಿ । ಅಥ = ಪಶ್ಚಾತ್, ಅಂತತಃ = ಪ್ರಲಯಕಾಲೇ, ಏನತ್ = ಅನ್ನರಸ-ಮಯಾಖ್ಯಂ ಅನಿರುದ್ಧಂ, ಅಪಿಯಂತಿ = ಇತರಾಜ್ಞೇಯತಯಾ ತದುದರಂ ಪ್ರವಿಶಂತೀತ್ಯರ್ಥಃ ।**

ತತ್ ಎಂದರೆ ತತ್ರ = ಆ ವಿಷಯದಲ್ಲಿ ಅಂದರೆ ಹಿಂದೆ ಹೇಳಿದ ವಿಷಯದಲ್ಲಿ, ಈ ಮುಂದಿನ ಛಂದೋಬದ್ಧ ಮಂತ್ರವಿದೆ.

ಹೀಗೆ ಹೇಳಿ ಉಪನಿಷತ್ತು ಆ ಮಂತ್ರವನ್ನು ಉಲ್ಲೇಖಿಸುತ್ತಿದೆ — "ಅನ್ನಾದ್ವೈ ಮುಂತಾಗಿ". ಅನ್ನಮಯ ಎಂಬ ಹೆಸರಿನ ಏಕದೇಶವನ್ನು ಉಪನಿಷತ್ತು 'ಅನ್ನ' ಎಂದಿದೆ. ಆದ್ದರಿಂದ ಅನ್ನಾತ್ ಎಂದರೆ ಅನ್ನಮಯನಿಂದ ಎಂದು ಅರ್ಥ. ಭೌತಿಕವಾದ ಅನ್ನದಿಂದಾದ ಈ ನಮ್ಮ ದೇಹದಲ್ಲಿರುವ ಅನಿರುದ್ಧನಿಂದ ಜೀವಿಗಳು ದೇಹ ಪಡೆದು ಹುಟ್ಟುತ್ತಾರೆ ಎಂದು ಮೊದಲ ಸಾಲಿನ ಅರ್ಥ. ಅಥೋ ಎಂದರೆ ಹುಟ್ಟಿದ ಜೀವಿಗಳು, ಅನಿರುದ್ಧನಿಂದ ಜೀವಂತಿ = ಪ್ರಾಣಗಳನ್ನು ಧರಿಸಿರುತ್ತಾರೆ. ಅಥ = ಆ ಮೇಲೆ, ಅಂತತಃ = ಪ್ರಲಯಕಾಲದಲ್ಲಿ, ಏನತ್ = ಅನ್ನರಸಮಯನಾದ ಅನಿರುದ್ಧನನ್ನು, ಅಪಿಯಂತಿ = ಯಾರಿಗೂ ತಿಳಿಯದಂತೆ ಅವನ ಉದರವನ್ನು ಸೇರುತ್ತಾರೆ, ಎಂದು ಅರ್ಥ.

**ಅನ್ನಂ ಹಿ - ಅನ್ನರಸಮಯನಾಮಾ ಅನಿರುದ್ಧೋ ಹಿ, ಭೂತಾನಾಂ ಜ್ಯೇಷ್ಠಂ = ಭೂತೇಭ್ಯೋ ಜ್ಯಾಯಃ, ಹಿ = ಯಸ್ಮಾತ್, ತಸ್ಮಾತ್ ಸರ್ವೌಷಧಮುಚ್ಯತೇ ।**

**'ಉಷ ದಾಹೇ' ಇತ್ಯತಃ ಕರ್ಮಣಿ ಘಞ, ಪುಗಂತೇತಿ ಗುಣೇ ಓಷಾಃ = ಸಂಸಾರೇ ದಹ್ಯಮಾನಾಃ, ಸರ್ವೇ ಚ ತೇ ಓಷಾಶ್ಚ = ಸರ್ವೌಷಾಃ ಧೀಯಂತೇ ಅಸ್ಮಿನ್ನಿತಿ ಸರ್ವೌಷಧಮ್ = ಸಂಸಾರದಗ್ಧಾನಾಂ ಆಶ್ರಯಃ । ಭವಭಯ ನಿವರ್ತಕಮುಚ್ಯತೇ ಇತ್ಯರ್ಥಃ ।**

ಅನ್ನಂ ಹಿ = ಅನ್ನರಸಮಯನಾಮಕ ಅನಿರುದ್ಧನಾದರೂ, ಭೂತಾನಾಂ ಜ್ಯೇಷ್ಠಂ = ಎಲ್ಲ ಪ್ರಾಣಿಗಳಿಗಿಂತಲೂ ಉತ್ತಮನು, ಹಿ = ಯಾವ ಕಾರಣದಿಂದಲೋ, ತಸ್ಮಾತ್ = ಆ ಕಾರಣದಿಂದ ಅನಿರುದ್ಧನು ಸರ್ವೌಷಧ ಎನಿಸಿದ್ದಾನೆ.

ಸುಡುವುದು ಎಂಬ ಅರ್ಥದ 'ಉಷ' ಧಾತುವಿಗೆ ಕರ್ಮಾರ್ಥದಲ್ಲಿ ಘಞ ಪ್ರತ್ಯಯ ಬಂದಾಗ 'ಉ'ಕಾರಕ್ಕೆ ''ಪುಗಂತ ಲಘೂಪಧಸ್ಯ ಚ'' ಸೂತ್ರದಿಂದ ಗುಣ ಬಂದಾಗ 'ಓಷಾಃ' ಎಂದು ರೂಪವಾಗುತ್ತದೆ. ಸಂಸಾರದಲ್ಲಿ ಸುಡುವವರು ಎಂದು ಅರ್ಥ. ಸರ್ವ + ಓಷಾಃ = ಸರ್ವೌಷಾಃ = ಸಂಸಾರದಗ್ಧರಾದ ಎಲ್ಲರೂ. 'ಧ' ಎಂಬ ಶಬ್ದವು 'ಧೀಯಂತೇ ಅಸ್ಮಿನ್' ಎಂಬ ಅರ್ಥದಲ್ಲಿ ಇದೆ. ಆಶ್ರಯ ಎಂದರ್ಥ. ಸಂಸಾರದಲ್ಲಿ ಬೆಂದವರಿಗೆ ಆಶ್ರಯತಾಣ ಎಂದರ್ಥ. ಸಂಸಾರಭಯ ನೀಗುವವನು ಎಂದು ತಾತ್ಪರ್ಯ.

**ಅನ್ನಮಯಸ್ಯ ಬ್ರಹ್ಮತ್ವಂ ಜಾನತಃ ಫಲಮಾಹ – ಸರ್ವಂ ವಾ ಇತಿ ॥ ಯೇ = ಅಧಿಕಾರಿಣಃ, ಅನ್ನಂ = ಅನ್ನರಸಮಯಾಖ್ಯಂ ಅನಿರುದ್ಧಂ, ಬ್ರಹ್ಮ = ಗುಣ ಪರಿಪೂರ್ಣಂ, ಉಪಾಸತೇ, ತೇ ವೈ = ತ ಏವ, ಸರ್ವಂ = ಪೂರ್ಣಂ, ಅನ್ನಮಯಂ ಹರಿಂ ಪ್ರಾಪ್ನುವಂತೀತಿ ।**

'ಸರ್ವಂ ವೈ ತೇನ್ನಂ' ಎಂದು ಮುಂತಾಗಿ ಉಪನಿಷತ್ತು ಅನಿರುದ್ಧನಿಗೆ ಬ್ರಹ್ಮತ್ವವನ್ನು ತಿಳಿದರೆ ಉಂಟಾಗುವ ಫಲವನ್ನು ಹೇಳುತ್ತದೆ.

ಯೇ = ಯಾವ ಯೋಗ್ಯ ಉಪಾಸಕನು, ಅನ್ನಂ = ಅನ್ನಮಯನಾದ ಅನಿರುದ್ಧನನ್ನು, ಬ್ರಹ್ಮ = ಗುಣಪೂರ್ಣನೆಂದು, ಉಪಾಸತೇ = ಧ್ಯಾನಿಸುವರೋ, ತೇ ವೈ = ಅವರೇ, ಸರ್ವಂ = ಪೂರ್ಣನಾದ, ಅನ್ನಮಯನಾದ ಶ್ರೀಹರಿಯನ್ನು ಹೊಂದುತ್ತಾರೆ.

**ಉಪಸಂಹರತಿ – ಅನ್ನಂ ಹಿ ಭೂತಾನಾಂ ಜ್ಯೇಷ್ಠಂ ಇತಿ ॥ ಹಿ = ಯತಃ, ಅನ್ನರಸಮಯಃ ಭೂತೇಭ್ಯಃ ಜ್ಯಾಯಾನ್ ತಸ್ಮಾತ್ ಸರ್ವೌಷಧಮುಚ್ಯತೇ । ತಾತ್ಪರ್ಯಾರ್ಥಂ ವಾ ಅನ್ನಂ ಹೀತ್ಯಾದಿ ಪುನರ್ವಚನಮ್ ।**

''ಅನ್ನಂ ಹಿ'' ಎಂದು ಮುಂತಾಗಿ ಈ ಪ್ರಕರಣವನ್ನು ಉಪಸಂಹಾರ ಮಾಡಲಾಗಿದೆ. ಹಿ = ಯಾವ ಕಾರಣದಿಂದ, ಅನ್ನರಸಮಯನಾದ ಅನಿರುದ್ಧನು ಎಲ್ಲರಿಗಿಂತಲೂ ಉತ್ತಮನೋ ಆದ್ದರಿಂದ ಅವನು ಸಂಸಾರದ ಭಯವನ್ನು ನೀಗುವವನು.

'ಅನ್ನಂ ಹಿ' ಎಂದು ಹಿಂದೆ ಹೇಳಿದ್ದನ್ನೇ ಮತ್ತೆ ಹೇಳಿದ್ದು, ಈ ವಿಷಯದಲ್ಲಿ ತಾತ್ಪರ್ಯವಿದೆ ಎಂದು ತಿಳಿಸುವ ಉದ್ದೇಶದಿಂದ, ಎಂದೂ ತಿಳಿಯಬಹುದು.

**ಅನ್ನಶಬ್ದೇನಾತ್ರ, ನ ಪ್ರಸಿದ್ಧಾನ್ನ ಮುಚ್ಯತೇ । ಕಿಂತು ಅಲೌಕಿಕಂ ವಸ್ತು ಇತಿ ಭಾವೇನ ತನ್ನಿರ್ವಕ್ತಿ - ಅದ್ಯತೇಽತ್ತಿ ಚೇತಿ ॥ ಭೂತೈರಿತಿ ವಿಪರಿಣಾಮೇನ ಅನುಷಂಗಃ । ಅದ್ಯತೇ = ಉಪಜೀವ್ಯತೇ, ಭೂತಾನಿ ಅತ್ತಿ ಚ = ಸಂಹರತಿ ।**

**ಸಂಹಾರಸ್ಯ ಊರ್ಣನಾಭಿವತ್ ಅದನರೂಪತ್ವಾತ್ ಅತ್ತಿ ಇತಿ ಉಕ್ತಮ್ । ತಸ್ಮಾತ್ = ಅದ್ಯಾತ್ತೃರೂಪತ್ವಾತ್ ತದ್ರೂಪಂ ಅನ್ನಂ ಉಚ್ಯತೇ ಇತ್ಯರ್ಥಃ ।**

**ಇತಿ ಶಬ್ದಸ್ಯ 'ಇತ್ಯೇಷ ಶ್ಲೋಕಃ' ಇತಿ ಪೂರ್ವೇಣ ಅನ್ವಯಃ ॥ ೫ ॥**

ಉಪನಿಷತ್ತಿನ ಅನ್ನ ಶಬ್ದಕ್ಕೆ ನಾವೆಲ್ಲ ಉಣ್ಣುವ ಅನ್ನ ಎಂದು ಅರ್ಥವಲ್ಲ. ಅಲೌಕಿಕವಾದ ವಸ್ತುವೊಂದು ಅದರ ಅರ್ಥ ಎನ್ನುತ್ತದೆ "ಅದ್ಯತೇಽತ್ತಿ ಚ" ಎಂಬ ಉಪನಿಷತ್ತಿನ ವಾಕ್ಯ. ಉಪನಿಷತ್ತಿನಲ್ಲಿರುವ "ಭೂತಾನಿ" ಎಂಬ ಶಬ್ದವನ್ನು "ಭೂತೈಃ" ಎಂದು ತೃತೀಯಾಂತವನ್ನಾಗಿ ಮಾಡಿ 'ಅದ್ಯತೇ' ಎಂಬ ಕ್ರಿಯಾಪದದೊಂದಿಗೂ ಅನ್ವಯಿಸಿಕೊಳ್ಳಬೇಕು. ಆಗ, ಪ್ರಾಣಿಗಳಿಂದ ಆಶ್ರಯಿಸಲ್ಪಡುವವನು, ಪ್ರಾಣಿಗಳನ್ನು ಸಂಹರಿಸುವವನು ಅನ್ನ ಎಂದು ಅರ್ಥವಾಗುತ್ತದೆ. ಪರಮಾತ್ಮನು ಜೀವಸಂಕುಲವನ್ನು ಸಂಹಾರ ಮಾಡುವುದೆಂದರೆ ಅವುಗಳನ್ನು ತನ್ನ ಹೊಟ್ಟೆಯೊಳಗೆ ತುಂಬಿಕೊಳ್ಳುವುದು, ಜೇಡರ ಹುಳುವಿನಂತೆ. ಅದಕ್ಕಾಗಿ 'ಸಂಹರತಿ' ಎನ್ನದೆ 'ಅತ್ತಿ' ಎನ್ನಲಾಗಿದೆ.

ಹೀಗೆ ಭೂತೋಪಜೀವ್ಯತ್ವ, ಭೂತಸಂಹಾರಗಳಿಂದಾಗಿ ಅನಿರುದ್ಧನು 'ಅನ್ನ' ಎನಿಸಿದ್ದಾನೆ.

'ಇತಿ' ಶಬ್ದಕ್ಕೆ ಆರಂಭದಲ್ಲಿರುವ "ಶ್ಲೋಕೋ ಭವತಿ" ಎಂಬ ಶಬ್ದದೊಂದಿಗೆ ಅನ್ವಯ. ॥ ೫ ॥

### ಪ್ರಾಣಮಯ ಪ್ರಕರಣ.

**ಸತ್ಯಂ ಜ್ಞಾನಮಿತಿ ಲಕ್ಷಣವಾಕ್ಯಸ್ಥ ಸತ್ಯಪದೇನ ಜಗತ್ ಸ್ರಷ್ಟೃತ್ವಂ, ಜಗಜ್ಜೀವನದತ್ವಂ, ಜಗತ್‌ಪ್ರವೃತ್ತಿರೂಪ ಗತಿ ಹೇತುತ್ವಂ, ಸಂಹರ್ತೃತ್ವಂ ಚೇತಿ ವಿವಕ್ಷಿತಾರ್ಥ ಚತುಷ್ಟಯಮಧ್ಯೇ ಸ್ರಷ್ಟೃತ್ವಂ, ಜೀವನದತ್ವಂ, ಸಂಹರ್ತೃತ್ವಂ ಚೇತಿ ತ್ರಯಂ ಆಕಾಶಾದಿ ಉತ್ಪತ್ತಿ ಪ್ರಕರಣೇ ಅನ್ನಮಯ ಪ್ರಕರಣೇ ಚ ವಿವೃತಮ್ ।**

**ಜಗತ್-ಪ್ರವರ್ತಕತ್ವರೂಪ ಗತಿ ಹೇತುತ್ವರೂಪಂ ಅರ್ಥಂ, ಪ್ರಾಕ್ ವಿವೃತಜೀವನಪ್ರದತ್ವಂ ಚ ಸ್ಫುಟಂ ವಿವರಿತುಂ ದೇಹಸ್ಥ ಪ್ರದ್ಯುಮ್ನಾಖ್ಯ-ರೂಪಪ್ರತಿಪಾದನಪರಂ ಪ್ರಕರಣಾಂತರಂ ಆರಭತೇ - ತಸ್ಮಾದ್ವಾ ಏತಸ್ಮಾದಿತ್ಯಾದಿನಾ ॥**

''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬ ಪ್ರಾರಂಭದ ವಾಕ್ಯ ಬ್ರಹ್ಮನ ಲಕ್ಷಣವನ್ನು ಹೇಳುತ್ತಿದೆ. ಅಲ್ಲಿ ಸತ್ಯಪದದಿಂದ ಜಗತ್ತಿನ ಸೃಷ್ಟಿಕರ್ತೃತ್ವ, ಜಗತ್ತಿಗೆ ಸ್ಥಿತಿಕರ್ತೃತ್ವ, ಜಗತ್ತಿಗೆ ಕ್ರಿಯಾಪ್ರದತ್ವ, ಸಂಹಾರಕರ್ತೃತ್ವ ಈ ನಾಲ್ಕು ಲಕ್ಷಣಗಳನ್ನು ಹೇಳಲಾಗಿದೆ. ಈ ನಾಲ್ಕರಲ್ಲಿ ಸೃಷ್ಟಿಕರ್ತೃತ್ವ, ಸ್ಥಿತಿಕರ್ತೃತ್ವ ಮತ್ತು ಸಂಹಾರ ಕರ್ತೃತ್ವ ಈ ಮೂರನ್ನು 'ಆತ್ಮನಃ ಆಕಾಶಃ ಸಂಭೂತಃ' ಎಂಬ ಆಕಾಶಾದಿ ಪದಾರ್ಥಗಳ ಉತ್ಪತ್ತಿ ಪ್ರಕರಣದಲ್ಲಿ ಹಾಗೂ ಅನ್ನಮಯ ಪ್ರಕರಣದಲ್ಲಿ ವಿವರಿಸಲಾಯಿತು. ಜಗತ್ಪ್ರವರ್ತಕತ್ವ ಎಂಬ ಲಕ್ಷಣವನ್ನು ಸಮರ್ಥಿಸಲು ಹಾಗೂ ಹಿಂದೆ ಹೇಳಿರುವ ಸ್ಥಿತಿರ್ಕೃತ್ವವನ್ನು ಸ್ಪಷ್ಟವಾಗಿ ವಿವರಿಸಲು ಪ್ರಾಣಮಯ ಪ್ರಕರಣವು ಹೊರಟಿದೆ.

**ತಸ್ಮಾದ್ ವಾ ಏತಸ್ಮಾದ್ ಅನ್ನರಸಮಯಾತ್ । ಅನ್ಯೋಽಂತರ ಆತ್ಮಾ ಪ್ರಾಣಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಪ್ರಾಣ ಏವ ಶಿರಃ । ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ । ಪೃಥಿವೀ ಪುಚ್ಛಂ ಪ್ರತಿಷ್ಠಾ ॥ ೬ ॥**

ಸತ್ಯತ್ವ ಗುಣವುಳ್ಳವನಾಗಿ ಹಿಂದಿನ ಎರಡು ಪ್ರಕರಣಗಳಲ್ಲಿ ಪ್ರಸ್ತುತನಾದ, ಈ ನಮ್ಮ ದೇಹದಲ್ಲಿ ನಿಯಾಮಕನಾಗಿರುವ, ಅನ್ನರಸಮಯನೆನಿಸಿರುವ ಅನಿರುದ್ಧನಿಂದ ಭಿನ್ನನಾಗಿ, ಅವನೊಳಗಿದ್ದು ನಿಯಾಮಕನಾಗಿ ವಾಯುವಿಕಾರವಾದ ಪ್ರಾಣಮಯ ಕೋಶದೊಳಗೆ ಪ್ರದ್ಯುಮ್ನನಿದ್ದಾನೆ.

ಪ್ರಾಣಮಯ ಕೋಶದಲ್ಲಿರುವ ಈ ಪ್ರದ್ಯುಮ್ನ ರೂಪದಿಂದ ಅನ್ನಮಯಕೋಶಸ್ಥನಾದ ಅನಿರುದ್ಧನು ವ್ಯಾಪ್ತನಾಗಿದ್ದಾನೆ. ಪ್ರಾಣಮಯ ಕೋಶದಲ್ಲಿರುವ ಪ್ರದ್ಯುಮ್ನನು ಪುರುಷನ ಆಕಾರದಲ್ಲಿಯೇ ಇದ್ದಾನೆ. ಅವನಂತೆ ಅನ್ನಮಯಕೋಶಸ್ಥನಾದ ಅನಿರುದ್ಧನೂ ಪುರುಷಾಕಾರನಾಗಿರುತ್ತಾನೆ.

ಪ್ರದ್ಯುಮ್ನನ ತಲೆ ಈ ದೇಹದಲ್ಲಿರುವ ಪಂಚವಾಯುಗಳಲ್ಲಿ ಒಂದಾದ ಪ್ರಾಣವಾಯುವಿನಲ್ಲಿದೆ. ಪ್ರಾಣ ಎಂಬ ಹೆಸರೂ ಅದಕ್ಕಿದೆ. ಬಲಕೈ ವ್ಯಾನ-ವಾಯುವಿನಲ್ಲಿದ್ದು ವ್ಯಾನ ಎಂಬ ಹೆಸರನ್ನು ಪಡೆದಿದೆ. ಎಡಕೈ ಅಪಾನ-ವಾಯುವಿನಲ್ಲಿದ್ದು ಅಪಾನನಾಮಕವಾಗಿದೆ. ಅವನ ಮಧ್ಯದೇಹ ಉದಾನವಾಯು. ಸಮಾನ ವಾಯುವೇ ಅವನ ಎರಡು ಕಾಲುಗಳು.

**ತಸ್ಮಾತ್ = ಸತ್ಯತ್ವೇನ ಲಕ್ಷಿತಾತ್, ಏತಸ್ಮಾತ್ = ಪ್ರಕರಣದ್ವಯೇನ ಪ್ರತಿಪಾದಿತಾತ್, ಅನ್ನರಸಮಯಾತ್ = ಪ್ರಾಕೃತಾನ್ನದೇಹೇ ನಿಯಂತೃತಯಾ ಸ್ಥಿತಾತ್ ಅನ್ನರಸಮಯ ನಾಮಕಾತ್ ಅನಿರುದ್ಧಾತ್ ಅನ್ಯಃ, ಅಂತರಃ = ತದಂತಸ್ಥಃ, ಆತ್ಮಾ = ನಿಯಾಮಕಃ, ಪ್ರಾಣಮಯಃ = ವಾಯುವಿಕಾರ ಪ್ರಾಣಮಯಕೋಶಸ್ಥಃ, ''ಪ್ರಾಣಂ ದೇವಾ ಅನು ಪ್ರಾಣಂತಿ'' ಇತಿ ವಾಕ್ಯಶೇಷೋಕ್ತದಿಶಾ, ಪ್ರಾಣಂತಿ=ಪ್ರವರ್ತಂತೇ, ಜೀವಂತಿ ವಾ ಬಾಹುಲ್ಯೇನ ಭೂತಾನಿ ಅನೇನ ಇತಿ ವ್ಯುತ್ಪತ್ತ್ಯಾ ಪ್ರಾಣಮಯ ಶಬ್ದವಾಚ್ಯಃ ಪ್ರದ್ಯುಮ್ನಾಖ್ಯಃ ತಿಷ್ಠತೀತ್ಯರ್ಥಃ ।**

ಉಪನಿಷತ್ತಿನ ಶಬ್ದಗಳ ಅರ್ಥ - ತಸ್ಮಾತ್ = ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬ ಶ್ಲೋಕದಲ್ಲಿ ಸತ್ಯತ್ವಗುಣವುಳ್ಳವನು ಎಂದು ನಿರೂಪಿಸಲ್ಪಟ್ಟ, ಏತಸ್ಮಾತ್ = ಹಿಂದಿನ ಎರಡು ಪ್ರಕರಣಗಳಲ್ಲಿ ಪ್ರತಿಪಾದಿಸಲ್ಪಟ್ಟ, ಅನ್ನರಸ-ಮಯಾತ್ = ಪ್ರಾಕೃತವಾದ ಈ ನಮ್ಮ ದೇಹದಲ್ಲಿ ನಿಯಾಮಕನಾಗಿರುವ ಅನ್ನರಸಮಯ ಎಂಬ ಹೆಸರಿನ ಅನಿರುದ್ಧನಿಗಿಂತ ಭಿನ್ನನಾದ, ಅಂತರಃ = ಅವನೊಳಗಿರುವ, ಆತ್ಮಾ = ಅವನಿಗೆ ನಿಯಾಮಕನಾದ, ಪ್ರಾಣಮಯಃ = ವಾಯುವಿಕಾರವಾದ ಪ್ರಾಣಮಯ ಕೋಶದಲ್ಲಿರುವ, ಪ್ರಾಣಮಯ ಶಬ್ದದಿಂದ ವಾಚ್ಯನಾದ ಪ್ರದ್ಯುಮ್ನನಿದ್ದಾನೆ.

''ಪ್ರಾಣಂತಿ ಅನೇನ ಇತಿ ಪ್ರಾಣಾಃ''. ಪ್ರಾಣಂತಿ ಎಂದರೆ ಪ್ರವೃತ್ತಿ ಮಾಡುತ್ತಾರೆ ಅಥವಾ ಜೀವಿಸುತ್ತಾರೆ ಎಂದು ಅರ್ಥ. ಯಾರಿಂದಾಗಿ ಪ್ರಾಣಿಗಳು

ಕ್ರಿಯಾಶೀಲರಾಗಿ ಬದುಕಿರುವರೋ ಅವನು ಪ್ರಾಣ. ''ಪ್ರಾಣಂ ದೇವಾ ಅನು ಪ್ರಾಣಂತಿ'' ಎನ್ನುವ ಮುಂದಿನ ಶ್ಲೋಕ ಪ್ರಾಣಶಬ್ದಕ್ಕೆ ಇದೇ ಅರ್ಥವನ್ನು ಹೇಳುತ್ತದೆ. ಹೀಗೆ 'ಪ್ರಾಣಮಯ' ಎನ್ನುವುದು ಪ್ರದ್ಯುಮ್ನನ ಹೆಸರು.

ಅನ್ನಮಯ ಅನಿರುದ್ಧನೊಳಗೆ ಪ್ರಾಣಮಯ ಪ್ರದ್ಯುಮ್ನ ಇದ್ದಾನೆ ಎಂದು ಒಟ್ಟು ಅರ್ಥ.

**ತೇನ = ಪ್ರಾಣಮಯೇನ ಪ್ರಾಣಮಯಕೋಶಸ್ಥೇನ ಪ್ರದ್ಯುಮ್ನೇನ, ಏಷಃ = ಅನ್ನಮಯಕೋಶಸ್ಥೋ ಅನ್ನರಸಮಯೋ ಅನಿರುದ್ಧಃ ನಿಚ್ಛಿದ್ರತಯಾ ಪೂರ್ಣಃ ।**

'ತೈನೈಷ ಪೂರ್ಣಃ' ಎಂಬ ಉಪನಿಷತ್ತಿಗೆ ಹೀಗೆ ಅರ್ಥ- ತೇನ = ಪ್ರಾಣಮಯನಿಂದ ಅರ್ಥಾತ್ ಪ್ರಾಣಮಯ ಕೋಶದಲ್ಲಿರುವ ಪ್ರದ್ಯುಮ್ನನಿಂದ, ಏಷಃ = ಅನ್ನಮಯಕೋಶದಲ್ಲಿರುವ ಅನ್ನರಸಮಯನೆನಿಸಿರುವ ಅನಿರುದ್ಧನು ಎಡೆಬಿಡದೆ ತುಂಬಿದ್ದಾನೆ.

**ವಿಶೇಷಾಂಶ** - ಅನ್ನಮಯ ಕೋಶ ಹೊರಭಾಗದಲ್ಲಿದೆ. ಅವರೊಳಗೆ ಪ್ರಾಣಮಯ ಕೋಶ. ಮೊದಲ ಕೋಶದೊಳಗೆ ಅನಿರುದ್ಧ ರೂಪದ ಪರಮಾತ್ಮನಿದ್ದಾನೆ. ಎರಡನೆಯ ಕೋಶದೊಳಗೆ ಪ್ರದ್ಯುಮ್ನನಿದ್ದಾನೆ. ಅಷ್ಟೇ ಅಲ್ಲ, ಅನಿರುದ್ಧನೊಳಗೆ ಪ್ರದ್ಯುಮ್ನನಿದ್ದಾನೆ. ಅನಿರುದ್ಧನ ಎಲ್ಲಾ ಭಾಗಗಳಲ್ಲೂ ಪ್ರದ್ಯುಮ್ನನ್ನು ತುಂಬಿದ್ದಾನೆ.

**ಸ ವಾ ಏಷಃ ಪುರುಷವಿಧಃ, ಪ್ರಾಣಮಯ ಕೋಶಸ್ಥೊ ಪ್ರಾಣಮಯ ನಾಮಾ ಪ್ರದ್ಯುಮ್ನಃ, ಪುರುಷವಿಧ ಏವ = ಪುರುಷಾಕಾರ ಏವ, ತಸ್ಯ = ಪ್ರಾಣಮಯಸ್ಯ ಉಕ್ತರೂಪ ಪ್ರದ್ಯುಮ್ನಸ್ಯ, ಪುರುಷವಿಧತಾಂ ಅನು = ಪುರುಷಾಕಾರ ತಾನುಸಾರೇಣ, ಅಯಂ = ಅನ್ನಮಯಕೋಶಸ್ಥಃ ತನ್ನಾಮಾ ಅನಿರುದ್ಧಃ ಪುರುಷಾಕಾರಃ । ತಸ್ಮಾದುದ್ಭೂತಃ ಇತಿ ಉಪಲಕ್ಷಣತಯಾ ಗ್ರಾಹ್ಯಮ್ ।**

''ಸ ವಾ ಏಷಃ ಪುರುಷವಿಧಃ'' ಎಂದು ಉಪನಿಷತ್ತು. ಪ್ರಾಣಮಯ-ಕೋಶದಲ್ಲಿರುವ ಪ್ರಾಣಮಯ ಎಂಬ ಹೆಸರಿನ ಪ್ರದ್ಯುಮ್ನನು ಪುರುಷವಿಧ ಏವ = ಮನುಷ್ಯಾಕಾರನಾಗಿದ್ದಾನೆ. ತಸ್ಯ = ಆ ಪ್ರಾಣ ಮಯನೆನಿಸಿರುವ, ಹಿಂದೆ ಹೇಳಿದ ಪ್ರದ್ಯುಮ್ನನ, ಪುರುಷ ವಿಧತಾಂ ಅನು = ಪುರುಷಾಕಾರಕ್ಕೆ ಅನುಸಾರವಾಗಿ,

ಅಯಂ = ಮೊದಲು ಪ್ರಸ್ತುತನಾದ, ಅನ್ನಮಯಕೋಶದಲ್ಲಿರುವ, ಅನ್ನಮಯ ಎಂಬ ಹೆಸರಿನ ಅನಿರುದ್ಧನೂ ಮನುಷ್ಯಾಕಾರನಾಗಿದ್ದಾನೆ. ಅಷ್ಟೇ ಅಲ್ಲ, ಅನ್ನಮಯನು ಪ್ರಾಣಮಯನಿಂದ ಹುಟ್ಟಿದ್ದಾನೆ ಎಂದೂ ತಿಳಿಯಬೇಕು.

**ವಿಶೇಷಾಂಶ** — ಅನ್ನಮಯ, ಪ್ರಾಣಮಯ ಮುಂತಾದ ಪರಮಾತ್ಮನ ಐದೂ ರೂಪಗಳು ಮನುಷ್ಯ ದೇಹದಲ್ಲಿರುವ ಐದು ಕೋಶಗಳಲ್ಲಿ ಸನ್ನಿಹಿತವಾಗಿವೆ. ಹೊರಗಿನ ಕೋಶ ಈ ದೇಹ. ಅದರೊಳಗೆ ಪ್ರಾಣಮಯ ವಾಯ್ವಾತ್ಮಕ ಕೋಶ. ಹೊರಗಿನ ದೇಹವೆಂಬ ಕೋಶದಲ್ಲಿ ಅನಿರುದ್ಧನಿದ್ದಾನೆ. ಒಳಗಿನ ಪ್ರಾಣಮಯಕೋಶದಲ್ಲಿ ಪ್ರದ್ಯುಮ್ನನಿದ್ದಾನೆ. ಪ್ರದ್ಯುಮ್ನನಿಂದ ಅಭಿವ್ಯಕ್ತಿಗೊಂಡ ರೂಪ ಅನಿರುದ್ಧ. ಪ್ರದ್ಯುಮ್ನ ರೂಪವು ಮನುಷ್ಯಾಕಾರವಾಗಿದೆ. ಆದ್ದರಿಂದ ಅನಿರುದ್ಧರೂಪವೂ ಮನುಷ್ಯಾಕಾರವಾಗಿದೆ. ಶ್ರೀ ವಾದಿರಾಜರು ಇದಕ್ಕೆ ಕೊಟ್ಟ ನಿದರ್ಶನ - ನಮ್ಮ ದೇಹದ ಗಾತ್ರ-ಆಕಾರಗಳಿಗೆ ಸರಿಯಾಗಿ ನಾವು ಅಂಗಿಯನ್ನು ಹೊಲಿಯುತ್ತೇವೆ. ದೇಹದಂತೆ ಅಂಗಿ. ಪ್ರದ್ಯುಮ್ನನಂತೆ ಅನಿರುದ್ಧ.

**ಪ್ರಾಣಮಯ ಶಬ್ದಿತಸ್ಯ ಪ್ರದ್ಯುಮ್ನಸ್ಯ ಅವಯವಾನಾಂ ಸ್ಥಾನಾನ್ಯಾಹ- ತಸ್ಯ ಪ್ರಾಣ ಏವ ಶಿರ ಇತ್ಯಾದಿನಾ ॥ ಪ್ರಾಣಸ್ಥಂ ಪ್ರಣೇತೃತ್ವೇನ ಪ್ರಾಣನಾಮಕಂ ಶಿರಃ ಇತ್ಯರ್ಥಃ । ಏವಂ, ವ್ಯಾನಸ್ಥೋ, ವಿಶೇಷೇಣ ಅನತಿ ಇತಿ ವ್ಯುತ್ಪತ್ತ್ಯಾ ವ್ಯಾನಾಖ್ಯೋ ದಕ್ಷಿಣಬಾಹುಃ ಇತ್ಯರ್ಥಃ । ಅಪ ಅನತೀತಿ ವ್ಯುತ್ಪತ್ತ್ಯಾ ಅಪಾನಾಖ್ಯಃ ಅಪಾನಸ್ಥಃ ಸವ್ಯಬಾಹುಃ ।**

**ಆಕಾಶ - ಪೃಥಿವೀ ಶಬ್ದಾಭ್ಯಾಂ ಉದಾನ ಸಮಾನೌ ಗ್ರಾಹ್ಯೌ । ತಸ್ಯ = ಪ್ರಾಣಮಯಾಖ್ಯ ಪ್ರದ್ಯುಮ್ನಸ್ಯ ಮಧ್ಯದೇಹಃ ಉದಾನನಾಮಾ ಉದಾನಸ್ಥಃ । ಪುಚ್ಛಮಿವ ಅಂತಿಮತಯಾ ಸ್ಥಿತೌ, ಪ್ರತಿಷ್ಠಾ - ಪ್ರತಿಷ್ಠೌ=ಪಾದೌ ಸಮಾನ ನಾಮಕೌ ಸಮಾನಸ್ಥೌ, ಪ್ರಾಣಮಯಕೋಶ-ಪ್ರಾಣಾದಯಃ ಪ್ರದ್ಯುಮ್ನಾಧೀನಾಃ ಇತಿ ಭಾವಃ ॥ ೬ ॥**

ಪ್ರಾಣಮಯ ಎಂಬ ಹೆಸರಿನ ಪ್ರದ್ಯುಮ್ನನ ಅವಯವಗಳಿರುವ ಸ್ಥಾನಗಳನ್ನು ''ತಸ್ಯ ಪ್ರಾಣ ಏವ ಶಿರಃ'' ಎಂದು ಮುಂತಾಗಿ ಉಪನಿಷತ್ತು ಹೇಳಿದೆ. ಪ್ರಾಣಮಯ ಪ್ರದ್ಯುಮ್ನನ ತಲೆ ಪ್ರಾಣವಾಯುವಿನಲ್ಲಿದೆ. ಚೇಷ್ಟಪ್ರದ-ವಾದುದರಿಂದ ಅದಕ್ಕೆ ಪ್ರಾಣ ಎಂದೇ ಹೆಸರು.

ಅವನ ಬಲಕೈ ವ್ಯಾನವಾಯುವಿನಲ್ಲಿದೆ, ವ್ಯಾನ ಎಂಬ ಹೆಸರೂ ಅದಕ್ಕಿದೆ. ವಿಶೇಷೇಣ ಅನತಿ ಇತಿ=ವ್ಯಾನಃ. ಸಾಮಾನ್ಯರಿಗಿಂತ ವಿಶಿಷ್ಟವಾದ ಕ್ರಿಯಾಶೀಲತೆಯನ್ನು ಹೊಂದಿರುವುದರಿಂದ ಅವನಿಗೆ ವ್ಯಾನ ಎಂದು ಹೆಸರು.

ಅವನ ಎಡತೋಳು ಅಪಾನವಾಯುವಿನಲ್ಲಿದ್ದು ಅಪಾನ ಎಂಬ ಹೆಸರನ್ನು ಪಡೆದಿದೆ. ಅಪನಯತಿ ದೋಷಾನ್ ಇತಿ=ಅಪಾನಃ. ದೋಷ-ನಾಶಕವಾದುದರಿಂದ ಅದಕ್ಕೆ ಅಪಾನ ಎಂಬ ಅನ್ವರ್ಥ ಹೆಸರಿದೆ.

ಉಪನಿಷತ್ತಿನ ಆಕಾಶಶಬ್ದದಿಂದ ಉದಾನವಾಯುವನ್ನೂ ಪೃಥಿವೀ ಶಬ್ದದಿಂದ ಸಮಾನವಾಯುವನ್ನೂ ತೆಗೆದುಕೊಳ್ಳಬೇಕು. ಪ್ರಾಣಮಯನ ಮಧ್ಯದೇಹ ಉದಾನನಲ್ಲಿದೆ. ಉದಾನ ಎಂಬ ಹೆಸರು ಅದಕ್ಕಿದೆ. ಬಾಲದಂತೆ ದೇಹದ ಕೊನೆಯಲ್ಲಿರುವ ಎರಡು ಕಾಲುಗಳು ಸಮಾನನಲ್ಲಿವೆ, ಸಮಾನ ನಾಮಕವಾಗಿವೆ. ''ಪ್ರತಿಷ್ಠಾ'' ಶಬ್ದವನ್ನು 'ಪ್ರತಿಷ್ಠೌ' ಎಂದು ದ್ವಿವಚನಾಂತವಾಗಿ ಪರಿಗ್ರಹಿಸಬೇಕು.

ಒಟ್ಟಿನಲ್ಲಿ ಪ್ರಾಣಮಯಕೋಶ ಮತ್ತು ಪ್ರಾಣಾಪಾನಾದಿವಾಯುಗಳು ಪ್ರದ್ಯುಮ್ನನ ಅಧೀನವಾಗಿವೆ ಎಂದು ಭಾವ ॥ ೬ ॥

**ಜಗದ್ಗತಿ-ಜೀವನಯೋಃ ಹೇತುತ್ವನಿಮಿತ್ತೇನ ಪ್ರಾಣಮಯ ನಾಮಕಃ ತನ್ನಾಮ ಕೋಶಸ್ಥಃ ಇತಿ ಉಕ್ತೇಽರ್ಥೇ ಶ್ಲೋಕಂ ಉದಾಹರತಿ – 'ತದಪ್ಯೇಷ ಶ್ಲೋಕೋ ಭವತಿ' ಇತ್ಯಾದಿನಾ ॥**

ಜಗತ್ತಿನ ಪ್ರವೃತ್ತಿ ಮತ್ತು ಸ್ಥಿತಿಗಳಿಗೆ ಕಾರಣನಾದುದರಿಂದ ಪ್ರಾಣಮಯ ಎಂಬ ಹೆಸರಿನಿಂದ ಕರೆಯಲ್ಪಟ್ಟು ಪ್ರಾಣಮಯ- ಕೋಶದಲ್ಲಿರುವವನು ಪ್ರದ್ಯುಮ್ನ ಎಂದು ಇದುವರೆಗೆ ಹೇಳಿದ ವಿಷಯದಲ್ಲಿ ''ಶ್ಲೋಕ''ವೊಂದನ್ನು ಉಪನಿಷತ್ತು 'ತದಪ್ಯೇಷಃ ಶ್ಲೋಕೋ ಭವತಿ'' ಎಂದು ಉದಾಹರಿಸಿದೆ.

**ತದಪ್ಯೇಷ ಶ್ಲೋಕೋ ಭವತಿ ।**

**ಪ್ರಾಣಂ ದೇವಾ ಅನು ಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ ।**

**ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷ-**

**ಮುಚ್ಯತೇ । ಸರ್ವಮೇವ ತ ಆಯುರ್ಯಂತಿ । ಯೇ ಪ್ರಾಣಂ**

**ಬ್ರಹ್ಮೋಪಾಸತೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್**

**ಸರ್ವಾಯುಷಮುಚ್ಯತ ಇತಿ ।**

**ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೭ ॥**

ಪ್ರಾಣಮಯನ ಕುರಿತು ಇದುವರೆಗೆ ಹೇಳಿದ ವಿಷಯದಲ್ಲಿ ಹೀಗೊಂದು ಶ್ಲೋಕವಿದೆ - ಪ್ರಾಣಮಯ ಪ್ರದ್ಯುಮ್ನನಿಂದಾಗಿಯೇ ದೇವತೆಗಳು ಜೀವಿಸಿದ್ದಾರೆ. ಮನುಷ್ಯರೂ ಪಶುಗಳೂ ಕೂಡಾ ಹೀಗೆ. ಪ್ರಾಣಮಯನು ಎಲ್ಲ ಜಂತುಗಳಿಗೂ ಜೀವನಹೇತು. ಇದರಿಂದಾಗಿಯೇ ಪ್ರಾಣಮಯನು ''ಸರ್ವಾಯುಷ' ಎನಿಸಿದ್ದಾನೆ.

ಅರ್ಹನಾದ ಸಾಧಕನು ಈ ಪ್ರಾಣಮಯನು ಗುಣಪೂರ್ಣನೆಂದು ಉಪಾಸನೆ ಮಾಡಿದರೆ ಮೋಕ್ಷವನ್ನು ಪಡೆಯುತ್ತಾನೆ.

ಆದ್ದರಿಂದ ಪ್ರಾಣಮಯನೇ ಸಕಲ ಜೀವಿಗಳಿಗೆ ಆಯುಷ್ಯವನ್ನು ನೀಡುವವನು. ಆದ್ದರಿಂದಲೇ ಅವನು 'ಸರ್ವಾಯುಷ'. ಹೀಗೆ ಪ್ರಾಣಮಯನ ಬಗ್ಗೆ ಶ್ಲೋಕವಿದೆ.

ಯಾವ ಅನ್ನಮಯನು ನಮ್ಮ ಈ ದೇಹಕ್ಕೆ ಆತ್ಮನಾಗಿರುವನೋ ಅಂತಹ ಅನ್ನಮಯನಿಗೆ ಈ ಪ್ರಾಣಮಯನು ಆತ್ಮನಾಗಿದ್ದಾನೆ.

**ತದಪಿ = ತತ್ರಾಪಿ, ಉಕ್ತೇ ಅರ್ಥೇ ಇತ್ಯರ್ಥಃ । ಯೇ ಮನುಷ್ಯಾಃ ಪಶವಃ ದೇವಾಶ್ಚ ಪ್ರಾಣಂ = ಪ್ರಾಣಮಯಂ, ಅನುಪ್ರಾಣಂತಿ = ಪ್ರಾಣಮಯ ಪ್ರೇರಣಯಾ, ಪ್ರಾಣಂತಿ = ಚೇಷ್ಟಂತೇ । ಹಿತಾಹಿತ ಪ್ರಾಪ್ತಿ ಪರಿಹಾರಾರ್ಥಂ ಪ್ರವೃತ್ತಿಮಂತೋ ಭವಂತಿ, ಜೀವಂತಿ ಚ ಇತ್ಯರ್ಥಃ ।**

**ಪ್ರಾಣೋ ಹಿ = ಪ್ರಾಣಮಯೋ ಹಿ, ಭೂತಾನಾಂ ಆಯುಃ = ಜೀವನ ಹೇತುಃ । ತಸ್ಮಾತ್ = ಭೂತಾನಾಂ ಜೀವನ ಹೇತುತ್ವಾತ್, ಸರ್ವಾಯುಷ-ಮುಚ್ಯತೇ । ಪ್ರಾಣಮಯಃ ಸರ್ವಾಯುಷಃ ಉಚ್ಯತೇ ಇತಿ ವಿಪರಿಣಾಮಃ ।**

ಉಪನಿಷತ್ತಿನಲ್ಲಿ 'ತದಪಿ' ಎಂದರೆ ತತ್ರಾಪಿ ಎಂದು ಅರ್ಥ. ಇದುವರೆಗೆ ಹೇಳಿದ ವಿಷಯದಲ್ಲಿ ಎಂದು ಭಾವ. ಯಾವ ಮನುಷ್ಯರೋ, ಪ್ರಾಣಿಗಳೋ, ದೇವತೆಗಳೋ, ಅವರೆಲ್ಲರೂ ಪ್ರಾಣಂ = ಪ್ರಾಣಮಯ ಪ್ರದ್ಯುಮ್ನನನ್ನು,

ಅನುಪ್ರಾಣಂತಿ = ಅನುಸರಿಸಿ ಅಂದರೆ ಅವನ ಪ್ರೇರಣೆಯಿಂದಲೇ ಪ್ರಾಣಂತಿ = ಕ್ರಿಯಾಶೀಲರಾಗಿದ್ದಾರೆ. ಅಂದರೆ ಹಿತಪ್ರಾಪ್ತಿಗಾಗಿ ಅಹಿತ ನಿವಾರಣೆಗಾಗಿ ಪ್ರಯತ್ನಿಸುತ್ತಿದ್ದಾರೆ, ಜೀವಿಸುತ್ತಿದ್ದಾರೆ ಕೂಡಾ. ಪ್ರಾಣೋ ಹಿ = ಪ್ರಾಣಮಯನೇ, ಭೂತಾನಾಂ ಆಯುಃ = ಪ್ರಾಣಿಗಳ ಆಯುಷ್ಯಕ್ಕೆ ಕಾರಣ. ತಸ್ಮಾತ್ = ಆದ ಕಾರಣ ಅಂದರೆ ಎಲ್ಲರ ಉಳಿವಿಗೆ ಕಾರಣನಾದುದರಿಂದ ಪ್ರಾಣಮಯನು 'ಸರ್ವಾಯುಷಂ' ಎನಿಸಿದ್ದಾನೆ. 'ಸರ್ವಾಯುಷಂ' ಎಂಬ ಶಬ್ದದ ಲಿಂಗವನ್ನು ಬದಲಾಯಿಸಿ 'ಸರ್ವಾಯುಷಃ ಪ್ರಾಣಮಯಃ' ಎಂದು ಅನ್ವಯಿಸಿಕೊಳ್ಳಬೇಕು.

ಪ್ರಾಣಮಯನು ಉಸಿರಾಟದ ಮೂಲಕ ಸಕಲರಿಗೂ ಜೀವನಾಧಾರ-ನಾಗಿದ್ದಾನೆ ಎಂದು ಭಾವಾರ್ಥ.

**ಪ್ರಾಣಮಯಜ್ಞಾನಿನಃ ಫಲಮಾಹ - ಸರ್ವಂ ಇತಿ ॥ ಯೇ ಅಧಿಕಾರಿಣಃ ಪ್ರಾಣಮಯ ಕೋಶಸ್ಥಂ, ಪ್ರಾಗುಕ್ತ ನಿಮಿತ್ತೇನ ಪ್ರಾಣಮಯ ಶಬ್ದವಾಚ್ಯಂ ಪ್ರದ್ಯುಮ್ನಂ, ಬ್ರಹ್ಮ=ದೇಶ-ಕಾಲ-ಗುಣ-ಅಪರಿಚ್ಛಿನ್ನತಯಾ ಬ್ರಹ್ಮಪದವಾಚ್ಯಂ ಉಪಾಸತೇ ಜಾನಂತಿ ಚ, ತೇ ಸರ್ವಮೇವ ಆಯುಃ = ಮೋಕ್ಷಂ ಯಂತಿ ।**

ಪ್ರಾಣಮಯ ಪ್ರದ್ಯುಮ್ನನ ಜ್ಞಾನದ ಫಲವನ್ನು 'ಸರ್ವಮೇವ ತೇ'' ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ಹೇಳಲಾಗಿದೆ.

ಅರ್ಹತೆಯನ್ನು ಪಡೆದ ಯಾರು ಪ್ರಾಣಮಯ ಕೋಶದಲ್ಲಿರುವ, ಹಿಂದೆ ಹೇಳಿದ ಕಾರಣದಿಂದ ಪ್ರಾಣಮಯ ಎಂಬ ಹೆಸರಿನ ಪ್ರದ್ಯುಮ್ನನನ್ನು, ಬ್ರಹ್ಮ = ದೇಶ-ಕಾಲ-ಗುಣಗಳ ಮಿತಿ ಇಲ್ಲದ ಕಾರಣ ಬ್ರಹ್ಮ ಪದದಿಂದ ವಾಚ್ಯ ಎಂದು ಧ್ಯಾನಿಸುತ್ತಾರೋ ಹಾಗೂ ತಿಳಿಯುತ್ತಾರೋ ಅಂತಹವರು, ಸರ್ವಮೇವ ಆಯುಃ = ಮೋಕ್ಷಕ್ಕೆ, ಯಂತಿ = ಹೋಗುತ್ತಾರೆ.

**ಉಪಸಂಹರತಿ - 'ಪ್ರಾಣೋ ಹಿ' ಇತಿ ॥ ತಾತ್ಪರ್ಯಾರ್ಥಂ ಅಭ್ಯಾಸೋ ವಾ ।**

**ಯದ್ವಾ, ಸರ್ವಾಯುಃಪ್ರದತ್ವೇ ಹೇತುಕಥನಾಯ ಪುನರ್ವಚನಮ್ ।**

**ಇತಿ ಶಬ್ದಃ 'ಇತ್ಯೇಷ ಶ್ಲೋಕಃ' ಇತಿ ಅನ್ವೇತಿ, ಪ್ರಾಣಮಯ ಪ್ರಕರಣ ಸಮಾಪ್ತೌ ವಾ ।**

**ಯದ್ವಾ, ಇತಿ ಶಬ್ದೇನ ಶ್ಲೋಕಂ ಸಮಾಪ್ಯ ಪ್ರಾಣಮಯಸ್ಯ ಧರ್ಮಾಂತರಂ ಆಹ ಉಪನಿಷತ್ - ತಸ್ಯೇತಿ ॥ ತಸ್ಯ ಅನ್ನಮಯ ಕೋಶಸ್ಥಸ್ಯ ತನ್ನಾಮಕ - ಅನಿರುದ್ಧಸ್ಯ, ಏಷಃ = ಪ್ರಾಣಮಯ ಕೋಶಸ್ಥ ತನ್ನಾಮಾ ಪ್ರದ್ಯುಮ್ನಃ, ಶಾರೀರ ಆತ್ಮಾ = ದೇಹಿರೂಪ - ಆತ್ಮಾ ।**

**ಅನ್ನಮಯ ಕೋಶಸ್ಥಂ ಅನಿರುದ್ಧಂ ದೇಹವತ್ ಕೃತ್ವಾ ತದಂತಸ್ಥ ಪ್ರಾಣಮಯಕೋಶಸ್ಥಃ ಪ್ರದ್ಯುಮ್ನಃ ದೇಹಿವತ್ ವರ್ತತೇ ಇತ್ಯರ್ಥಃ । ರೂಪಯೋರಭೇದೇಽಪಿ ದೇಹ-ದೇಹಿ ಭಾವ ಅನ್ಯತ್ವ-ಆಂತರತ್ವಾದಿಕಂ ಅಧಿಷ್ಠಾನಭೂತ ಕೋಶಯೋಃ ತಥಾತ್ವಾತ್ ತನ್ನಿಷ್ಠರೂಪಯೋರಪಿ ತಥಾತ್ವಂ, ಉಪಚರಿತಂ ವಾ । ಭೇದ ಪ್ರತಿನಿಧಿ ವಿಶೇಷೇಣ - ಐಶ್ವರ್ಯಬಲೇನ ಚ ಮುಖ್ಯಮೇವ ಇತಿ ವಾ ಜ್ಞೇಯಮ್ । ಏವಂ ಅಗ್ರೇಽಪಿ ।**

ಉಪನಿಷತ್ತಿನಲ್ಲಿ ಎರಡನೆಯ ಬಾರಿಗೆ ''ಪ್ರಾಣೋ ಹಿ ಭೂತಾನಾಂ ಆಯುಃ'' ಎಂಬುದು ಉಪಸಂಹಾರರೂಪವಾಗಿ ಬಂದಿದೆ. ಅಥವಾ, ಈ ವಿಷಯ ಕೇವಲ ಪ್ರಶಂಸೆ ಅಲ್ಲ, ಅದರಲ್ಲಿ ವಿಶೇಷ ತಾತ್ಪರ್ಯ ತನಗಿದೆ ಎಂದು ತಿಳಿಸಲು ಉಪನಿಷತ್ತಿನ ಪುನರುಕ್ತಿ.

ಅಥವಾ 'ಜ್ಞಾನಿಗಳಿಗೆ ಮೋಕ್ಷ ಕೊಡುತ್ತಾನೆ' ಎಂದು ಹಿಂದೆ ಹೇಳಿದ ವಿಷಯದ ಸಮರ್ಥನೆಗಾಗಿ ಮತ್ತೆ ''ಪ್ರಾಣೋ ಹಿ ಭೂತಾನಾಂ ಆಯುಃ'' ಎಂದು ಹೇಳಲಾಗಿದೆ. ಪ್ರಾಣಮಯನು ಸಕಲರಿಗೂ ಜೀವನಪ್ರದನಾದುದರಿಂದಲೇ ಜ್ಞಾನಿಗಳಿಗೆ ಮೋಕ್ಷವನ್ನೂ ಕೊಡಬಲ್ಲ, ಎಂದು.

ಇಲ್ಲಿರುವ ಇತಿ ಶಬ್ದವನ್ನು ಆರಂಭದಲ್ಲಿರುವ 'ಶ್ಲೋಕ'ಶಬ್ದದೊಂದಿಗೆ ಸೇರಿಸಿ 'ಇತ್ಯೇಷಃ ಶ್ಲೋಕೋ ಭವತಿ'' ಎಂದು ಅನ್ವಯಿಸಿಕೊಳ್ಳಬೇಕು. ಅಥವಾ ಪ್ರಾಣಮಯ ಪ್ರಕರಣವು ಮುಗಿಯಿತು ಎನ್ನುವ ಸೂಚನೆಗಾಗಿ ಇತಿ ಶಬ್ದದ ಪ್ರಯೋಗವನ್ನು ಮಾಡಲಾಗಿದೆ.

ಅಥವಾ, 'ಇತಿ' ಶಬ್ದದಿಂದ ಶ್ಲೋಕದ ಸಮಾಪ್ತಿಯನ್ನು ಸೂಚಿಸಿ ಪ್ರಾಣಮಯನಿಗೆ ಇನ್ನೊಂದು ವೈಶಿಷ್ಟ್ಯವನ್ನು ''ತಸ್ಯೈಷ ಏವ'' ಎಂದು ಉಪನಿಷತ್ತು ಹೇಳುತ್ತಿದೆ.

ತಸ್ಯ = ಅನ್ನಮಯ ಕೋಶದಲ್ಲಿದ್ದು ಅನ್ನಮಯ ಎನಿಸಿರುವ ಅನಿರುದ್ಧನಿಗೆ, ಏಷಃ = ಪ್ರಾಣಮಯ ಕೋಶದಲ್ಲಿರುವ ಪ್ರಾಣಮಯನಾಮಕನಾದ ಪ್ರದ್ಯುಮ್ನನು, ಶಾರೀರಃ ಆತ್ಮಾ = ದೇಹದೊಳಗಿರುವ ಆತ್ಮನಂತೆ.

ಅನ್ನಮಯ ಕೋಶದಲ್ಲಿರುವ ಅನಿರುದ್ಧನನ್ನು ಶರೀರದಂತೆ ಮಾಡಿಕೊಂಡು ಆ ಕೋಶದೊಳಗಿರುವ ಪ್ರಾಣಮಯಕೋಶಸ್ಥನಾದ ಪ್ರದ್ಯುಮ್ನನು ಅವನಿಗೆ ಆತ್ಮನಂತೆ ಇದ್ದಾನೆ ಎಂದು ಅರ್ಥ.

ಪರಮಾತ್ಮನ ಅನಿರುದ್ಧ ಪ್ರದ್ಯುಮ್ನ ರೂಪಗಳಿಗೆ ಇನಿತೂ ಭೇದವಿಲ್ಲ. ಆದರೂ ಅನಿರುದ್ಧ ದೇಹ, ಪ್ರದ್ಯುಮ್ನ ಆತ್ಮ; ಅನಿರುದ್ಧ ಹೊರಗೆ ಪ್ರದ್ಯುಮ್ನ ಒಳಗೆ, ಅನಿರುದ್ಧನಿಗಿಂತ ಪ್ರದ್ಯುಮ್ನ ಬೇರೆ (ಅನ್ಯೋಂತರ ಆತ್ಮಾ) ಈ ಮುಂತಾಗಿ ಉಪನಿಷತ್ತಿನಲ್ಲಿ ಹೇಳಿರುವುದು ಗೌಣ. ಜಡವಾದ ಕೋಶಗಳಲ್ಲಿ ಇಂತಹ ವ್ಯತ್ಯಾಸಗಳು ಇರುವ ಕಾರಣ ಅದರೊಳಗಿರುವ ಪರಮಾತ್ಮನ ರೂಪಗಳಲ್ಲೂ ಅವನ್ನು ಅನ್ವಯಿಸಲಾಗಿದೆ.

ಅಥವಾ, ಗೌಣವೆನ್ನಬೇಕಾಗಿಲ್ಲ. ಅನ್ಯತ್ವ, ಆಂತರತ್ವಗಳನ್ನು ಮುಖ್ಯವಾಗಿಯೇ ಭಗವದ್ರೂಪಗಳಲ್ಲಿ ಹೊಂದಿಸಬಹುದು. ಅವನ ರೂಪಗಳಿಗೆ ಅಭೇದವಿದ್ದರೂ ಭೇದ ಪ್ರತಿನಿಧಿಯಾದ 'ವಿಶೇಷ'ವಿದೆ. ಅಂತಹ ವಿಶೇಷವಿರುವುದರಿಂದಾಗಿಯೇ, ಅಥವಾ ಪರಮಾತ್ಮನ ಅಚಿಂತ್ಯ ಶಕ್ತಿಯಿಂದಲೋ, ಆ ರೂಪಗಳಿಗೆ ಅನ್ಯತ್ವ ಆಂತರತ್ವಗಳು ಇವೆ ಎನ್ನಬಹುದು. ಮನೋಮಯಾದಿ ಪ್ರಕರಣಗಳಲ್ಲೂ ಹೀಗೆಯೇ ತಿಳಿಯಬೇಕು.

**'ತಸ್ಯೈಷ' ಇತ್ಯತ್ರ, 'ತತ್' ಶಬ್ದಾರ್ಥಂ ವ್ಯನಕ್ತಿ-ಯಃ ಪೂರ್ವಸ್ಯ ಇತಿ ॥ ಪೂರ್ವಸ್ಯ = ಅನ್ನ ವಿಕಾರಕೋಶಸ್ಯ, ಯಃ = ಅನಿರುದ್ಧಃ ಶಾರೀರಾತ್ಮತಯಾ ವರ್ತತೇ, ಅನ್ನ ವಿಕಾರದೇಹಂ ಶರೀರವತ್ ಕೃತ್ವಾ ಅಂತಃವರ್ತತೇ ತಸ್ಯೈವ ಇತಿ ॥ ೭ ॥**

'ತಸ್ಯೈಷ ಏವ' ಎಂಬ ಉಪನಿಷತ್ತಿನಲ್ಲಿ 'ತಸ್ಯ' ಎಂದರೆ ಅವನ ಎಂದು ಅರ್ಥ. ಅವನೆಂದರೆ ಯಾರು? ಅದನ್ನು 'ಯಃ ಪೂರ್ವಸ್ಯ' ಎಂದು ಉಪನಿಷತ್ತು ಪರಿಚಯಿಸಿದೆ. ಪೂರ್ವಸ್ಯ = ಅನ್ನದಿಂದ ಬೆಳೆದ ಈ ಬಾಹ್ಯದೇಹಕ್ಕೆ, ಯಃ = ಯಾವ ಅನಿರುದ್ಧನು ಆತ್ಮನಂತಿದ್ದಾನೋ, ಅರ್ಥಾತ್ ನಮ್ಮ ಈ ದೇಹವನ್ನು ತನ್ನ

ಶರೀರವನ್ನಾಗಿ ಮಾಡಿ ಅದರೊಳಗೆ ಅನಿರುದ್ಧನು ಆತ್ಮನಂತೆ ಇದ್ದರೆ ಅಂತಹ ಅನಿರುದ್ಧನನ್ನು ತನ್ನ ಶರೀರವನ್ನಾಗಿ ಮಾಡಿಕೊಂಡು ಅದರೊಳಗೆ ಆತ್ಮನಂತೆ ಪ್ರದ್ಯುಮ್ನನಿದ್ದಾನೆ, ಎಂದು ಅರ್ಥ. ॥ ೭ ॥

ಮನೋಮಯ ಪ್ರಕರಣ

**ಏವಂ ಲಕ್ಷಣವಾಕ್ಯಸ್ಥ ಸತ್ಯಪದಾರ್ಥಂ ಪ್ರಕರಣತ್ರಯೇಣ ವಿವೃತ್ಯ ಇದಾನೀಂ ಅಖಿಲವಸ್ತುಗತ ಅಖಿಲ ಸಾಮಾನ್ಯ ವಿಷಯಕತ್ವರೂಪಂ ಜ್ಞಾನತ್ವಲಕ್ಷಣಂ ವಿವೃಣೋತಿ - ತಸ್ಮಾದಿತ್ಯಾದಿನಾ ॥**

ಇದುವರೆಗಿನ ಪ್ರಕರಣಗಳಲ್ಲಿ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಬ್ರಹ್ಮನ ಲಕ್ಷಣವನ್ನು ಹೇಳುವ ವಾಕ್ಯದಲ್ಲಿರುವ ಸತ್ಯ ಪದದ ಅರ್ಥಗಳನ್ನು ವಿವರಿಸಲಾಯಿತು. ಮುಂದಿನ ಎರಡು ಪ್ರಕರಣಗಳಲ್ಲಿ 'ಜ್ಞಾನ' ಪದದ ಅರ್ಥವನ್ನು ವಿವರಿಸಲಾಗಿದೆ. ಜ್ಞಾನಪದಕ್ಕೆ ಒಂದರ್ಥ, ಜಗತ್ತಿನ ಎಲ್ಲಾ ವಸ್ತುಗಳಲ್ಲೂ ಇರುವ ಸಾಮಾನ್ಯ ಧರ್ಮಗಳ ಜ್ಞಾನವು ಬ್ರಹ್ಮನಿಗೆ ಇದೆ ಎಂದು. ಇನ್ನೊಂದು ಅರ್ಥ, ಎಲ್ಲಾ ವಸ್ತುಗಳನ್ನೂ ವ್ಯಕ್ತಿಶಃ ಬ್ರಹ್ಮನು ತಿಳಿದಿದ್ದಾನೆ ಎಂದು. ಇವೆರಡರಲ್ಲಿ ಮೊದಲ ಲಕ್ಷಣವನ್ನು ಮುಂದಿನ ಮನೋಮಯ ಪ್ರಕರಣವು ವಿವರಿಸಿದೆ.

**ತಸ್ಮಾದ್ ವಾ ಏತಸ್ಮಾತ್ ಪ್ರಾಣಮಯಾತ್ । ಅನ್ಯೋಽಂತರ ಆತ್ಮಾ ಮನೋಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಮ್ । ಅನ್ವಯಂ ಪುರುಷ ವಿಧಃ । ತಸ್ಯ ಯಜುರೇವ ಶಿರಃ । ಋಗ್ ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ ॥ ೮ ॥**

'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಮಂತ್ರದಿಂದ ವಿಶಿಷ್ಟ ಗುಣ-ಧರ್ಮಗಳುಳ್ಳವನಾಗಿ ನಿರೂಪಿಸಲ್ಪಟ್ಟಿರುವ, ಪ್ರಾಣಮಯ ಪ್ರಕರಣದಲ್ಲಿ ವರ್ಣಿತನಾದ ಪ್ರಾಣಮಯ ನಾಮಕ ಪ್ರದ್ಯುಮ್ನನಿಗಿಂತ ಭಿನ್ನನಾಗಿ ಅವನೊಳಗೆ ವ್ಯಾಪ್ತನಾದವನು ಮನೋಮಯನಾಮಕನಾದ ಸಂಕರ್ಷಣನು. ಈ

ಸಂಕರ್ಷಣನಿಂದ ಆ ಪ್ರದ್ಯುಮ್ನನು ಎಲ್ಲೆಡೆಯೂ ವ್ಯಾಪ್ತನಾಗಿದ್ದಾನೆ. ಇಂತಹ ಸಂಕರ್ಷಣನು ಮನುಷ್ಯಾಕಾರದಲ್ಲಿದ್ದಾನೆ. ಅವನ ಅಂತಹ ಆಕಾರವನ್ನು ಅನುಸರಿಸಿ ಪ್ರದ್ಯುಮ್ನನೂ ಪುರುಷಾಕಾರನಾಗಿರುತ್ತಾನೆ.

ಇಂತಹ ಸಂಕರ್ಷಣನ ಶಿರೋ ಭಾಗ 'ಯಜುಃ' ಎಂಬ ಹೆಸರಿನಿಂದ ಯಜುರ್ವೇದದಲ್ಲಿದೆ. ಬಲಬಾಹು 'ಋಕ್' ಎಂದೆನಿಸಿ ಋಗ್ವೇದದಲ್ಲಿದೆ. ಎಡಬಾಹು 'ಸಾಮ' ಎಂಬ ಹೆಸರಿನಿಂದ ಸಾಮವೇದದಲ್ಲಿದೆ. ಅವನ ಮಧ್ಯದೇಹ ವಿಸ್ತೃತವಾದ ಪಂಚರಾತ್ರಾಗಮದಲ್ಲಿದೆ. ಅವನೆರಡು ಕಾಲುಗಳು ಅಥರ್ವ ಮತ್ತು ಆಂಗಿರಸವೆಂಬ ಯಜುಃ ಶಾಖೆಯಲ್ಲಿವೆ.

**ವಿಶೇಷಾರ್ಥ** — ಋಗ್ವೇದ, ಯಜುರ್ವೇದ, ಸಾಮವೇದ, ನಾರಾಯಣ ಪ್ರಣೀತವಾದ ಪಂಚರಾತ್ರಾಗಮ ಇವುಗಳಲ್ಲಿ ಸಂಕರ್ಷಣನ ಅವಯವಗಳಿವೆ ಎಂದರೆ ಆ ವಾಙ್ಮಯಗಳು ಸಂಕರ್ಷಣನ ಒಂದೊಂದು ಅವಯವಗಳನ್ನಷ್ಟೇ ತಿಳಿಸಲು ಸಾಧ್ಯವಾಗಿವೆ, ಎಂದು ಅರ್ಥ. ವಾದಿರಾಜರು ಋಗಾದಿಗಳ ನಿಯಾಮಕವಾಗಿ ಅವನ ಒಂದೊಂದು ಅವಯವಗಳಿವೆ ಎಂದು ತಿಳಿಸಿದ್ದಾರೆ.

ಪರಮಾತ್ಮನಿಗೆ ಸಕಲವಸ್ತುಗಳ ಸಾಮಾನ್ಯ ಜ್ಞಾನವಿದೆ ಎಂದರೆ ಮನುಷ್ಯರಲ್ಲಿರುವ ಬ್ರಾಹ್ಮಣತ್ವಾದಿ ಧರ್ಮಗಳನ್ನು ಬ್ರಹ್ಮಚರ್ಯಾದಿ ಆಶ್ರಮಗಳನ್ನು ಅವನು ತಿಳಿದಿದ್ದಾನೆ. ದೇವತ್ವ, ಮನುಷ್ಯತ್ವ, ರಾಕ್ಷಸತ್ವಾದಿ ಧರ್ಮಗಳನ್ನು ಅವನು ತಿಳಿದಿದ್ದಾನೆ. ಹೀಗೆಯೇ ಪ್ರಾಣಿ, ಪಶು, ಪಕ್ಷಿಗಳಲ್ಲಿರುವ ಜಾತಿಗಳನ್ನು ಬ್ರಹ್ಮನು ತಿಳಿದಿದ್ದಾನೆ, ಎಂದು ಅರ್ಥ. ಎಲ್ಲಾ ವಸ್ತುಗಳನ್ನು ಅವುಗಳಲ್ಲಿರುವ ಧರ್ಮಗಳನ್ನು ವ್ಯಕ್ತಿಶಃ ತಿಳಿದಿರುವುದು ವಿಶೇಷತಃ ಸರ್ವಜ್ಞತ್ವ.

**ತಸ್ಮಾತ್ = ಮಂತ್ರವರ್ಣ ಲಕ್ಷಿತಾತ್, ಏತಸ್ಮಾತ್ = ಪ್ರಾಣಮಯಪ್ರಕರಣೇನ ವ್ಯಾಖ್ಯಾತಾತ್, ಪ್ರಾಣಮಯಕೋಶಸ್ಥಾತ್, ತನ್ನಾಮಕ ಪ್ರದ್ಯುಮ್ನಾತ್ ಅನ್ಯಃ, ಅಂತರಃ = ಅಂತಸ್ಥಃ, ಆತ್ಮಾ = ವ್ಯಾಪ್ತಃ, ಮನೋಮಯಃ । ಮನು ಅವಬೋಧನೇ ಇತ್ಯತಃ ಅಸುನ್ ಪ್ರತ್ಯಯೇ, ಮನಸಾ = ಜ್ಞಾನೇನ, ಪ್ರಚುರಃ ಮನೋಮಯಃ, ಇತಿ ವ್ಯುತ್ಪತ್ಯಾ ಅಶೇಷ ವಸ್ತುಗತ - ಸಾಮಾನ್ಯಾಕಾರಗೋಚರ ಜ್ಞಾನ ಪ್ರಾಚುರ್ಯವತ್ವ ನಿಮಿತ್ತೇನ ಮನೋಮಯ ನಾಮಕಃ ಮನೋ-ಮಯಕೋಶಸ್ಥಃ ಸಂಕರ್ಷಣಃ ತಿಷ್ಠತಿ ಇತ್ಯರ್ಥಃ ।**

ತಸ್ಮಾತ್ = 'ಸತ್ಯಂ ಜ್ಞಾನಂ' ಇತ್ಯಾದಿ ಮಂತ್ರದಲ್ಲಿ ಹೇಳಿರುವ ಲಕ್ಷಣಗಳುಳ್ಳ ಏತಸ್ಮಾತ್ = ಪ್ರಾಣಮಯ ಪ್ರಕರಣದಲ್ಲಿ ವಿವರಿಸಿದಂತೆ ಪ್ರಾಣಮಯ-ಕೋಶದಲ್ಲಿರುವ ಪ್ರಾಣಮಯ ಎಂಬ ಹೆಸರಿನ ಪ್ರದ್ಯುಮ್ನನಿಗಿಂತ ಭಿನ್ನನಾಗಿ, ಅಂತರಃ = ಅವನೊಳಗಿರುವವನು, ಆತ್ಮಾ = ವ್ಯಾಪ್ತನಾದವನು 'ಮನೋಮಯ' ನಾಮಕ ಪರಮಾತ್ಮನರೂಪ.

ಮನೋಮಯ ಶಬ್ದವು ಜ್ಞಾನ ಎಂಬ ಅರ್ಥದ 'ಮನು' ಧಾತುವಿನಿಂದಾಗಿದೆ. ಮನಸಾ ಪ್ರಚುರಃ = ಮನೋಮಯಃ. ಮನಸಾ ಎಂದರೆ ಜ್ಞಾನದಿಂದ. ಮಯಟ್ ಪ್ರತ್ಯಯಕ್ಕೆ ಪೂರ್ಣ ಎಂದರ್ಥ. ಒಟ್ಟಿನಲ್ಲಿ ಜ್ಞಾನಪೂರ್ಣ ಎಂದು ಅರ್ಥವಾಗುತ್ತದೆ. ಎಲ್ಲ ವಸ್ತುಗಳಲ್ಲಿ ಇರುವ ಸಾಮಾನ್ಯ ಧರ್ಮಗಳ ಜ್ಞಾನದಿಂದ ಪೂರ್ಣನಾದುದರಿಂದ ಮನೋಮಯ ಎಂದೆನಿಸಿ ಮನೋಮಯ ಕೋಶದಲ್ಲಿ ಪ್ರದ್ಯುಮ್ನನಿದ್ದಾನೆ ಎಂದು ಭಾವ.

**ತೇನ = ಮನೋಮಯೇನ ಉಕ್ತರೂಪೇಣ ಸಂಕರ್ಷಣಾಖ್ಯೇನ, ಏಷಃ = ಪ್ರಾಣಮಯಕೋಶಸ್ಥಃ ತನ್ನಾಮಾ ಪ್ರದ್ಯುಮ್ನಃ, ನಿಚ್ಛಿದ್ರತಯಾ ಪೂರ್ಣಃ । ಸ ವಾ ಏಷಃ = ಮನೋಮಯಃ ಸಂಕರ್ಷಣಃ ಪುರುಷಾಕಾರ ಏವ ।**

**ತಸ್ಯ ಪುರುಷಾಕಾರತಾಂ ಅನುಸೃತ್ಯ, ಅಯಂ = ಪ್ರಾಣಮಯಃ ಪುರುಷಾಕಾರಃ । ತತ ಉದ್ಭೂತಃ ಇತ್ಯಪಿ ಧ್ಯೇಯಮ್ ।**

ತೇನ = ಮನೋಮಯನಾದ ಜ್ಞಾನಪೂರ್ಣನಾದ ಸಂಕರ್ಷಣನಿಂದ, ಏಷಃ = ಪ್ರಾಣಮಯ ಕೋಶದಲ್ಲಿರುವ, ಪ್ರಾಣಮಯನಾಮಕ ಪ್ರದ್ಯುಮ್ನನು ಎಡೆಬಿಡದೆ ಪೂರ್ಣನಾಗಿದ್ದಾನೆ.

ಅಂತಹ ಈ ಮನೋಮಯ ಸಂಕರ್ಷಣನು ಮನುಷ್ಯರ ಆಕಾರದಂತಿದ್ದಾನೆ. ಒಳಗಿರುವ ಅವನ ಮನುಷ್ಯಾಕಾರಕ್ಕೆ ಅನುಗುಣವಾಗಿ, ಅಯಂ = ಹೊರಗಿರುವ ಪ್ರಾಣಮಯನೂ ಮನುಷ್ಯಾಕಾರನಾಗಿದ್ದಾನೆ. ಅಷ್ಟೇ ಅಲ್ಲದೆ, ಸಂಕರ್ಷಣ ರೂಪದಿಂದಲೇ ಪ್ರಾಣಮಯ ಪ್ರದ್ಯುಮ್ನ ರೂಪವು ಆವಿರ್ಭವಿಸಿದೆ.

**ಮನೋ ಮಯಸ್ಥಸ್ಯ ತನ್ನಾಮ್ನಃ ಸಂಕರ್ಷಣಸ್ಯ ಶಿರ ಆದ್ಯವಯವಾನಾಂ ಸ್ಥಾನಾನ್ಯಾಹ - ತಸ್ಯೇತ್ಯಾದಿನಾ ॥**

**ಮನೋಮಯಸ್ಥಸ್ಯ ತನ್ನಾಮ್ನಃ ಸಂಕರ್ಷಣಸ್ಯ ಶಿರಃ, ಯಜುಃ = ಯಜ್ಞ ಹರಣ ನಿಮಿತ್ತೇನ ಯಜುರ್ನಾಮಕಂ, ಯಜುಃ ಸಂಸ್ಥಮ್ । ಏವ ಶಬ್ದೋ ಯಜುಃ ಶಬ್ದಸ್ಯ ಮುಖ್ಯತ್ವಾರ್ಥಃ ।**

**ಅರ್ಚನ ಸ್ವೀಕಾರ ಹೇತುನಾ ಋಜನಾಮಕಃ, ಋಕ್‌ಸ್ಥಃ, ದಕ್ಷಿಣ ಬಾಹುಃ । ದೋಷಾತ್ ಸಮ್ಯಕ್ ಕರಣ ಹೇತುನಾ ಸಾಮನಾಮಾ ಸಾಮಸ್ಥಃ ಉತ್ತರಬಾಹುಃ । ಶತಕೋಟಿತಯಾ ಅತಿವಿಸ್ತೃತತ್ವ ಹೇತುನಾ ಉಪದೇಶತ್ವರೂಪ ಹೇತುನಾ ಚ ಆದೇಶಾಖ್ಯಃ, ಅದೇಶಶಬ್ದಿತ ಪಂಚರಾತ್ರಸ್ಥಃ ಮಧ್ಯದೇಹಃ ।**

**ಅಧರತ್ವ - ಅಂಗಿರಸತ್ವ ಹೇತುಭ್ಯಾಂ ಅಥರ್ವಾಂಗಿರಸ ನಾಮಕೌ ಅಥರ್ವಾಂಗಿರಸಸ್ಥೌ, ಪುಚ್ಛಂ = ಪುಚ್ಛಮಿವ ಅಂತ್ಯತಯಾ ಸ್ಥಿತೌ, ಪ್ರತಿಷ್ಠಾ - ಪ್ರತಿಷ್ಠೌ = ಪಾದೌ ।**

**ಯಜುರಾದಿಕಂ ತಸ್ಯ ಶಿರಃ ಪ್ರಭೃತಿ ಏಕೈಕಾವಯವ ಪ್ರತಿಪಾದಕಂ ನ ಸಾಕಲ್ಯೇನ ತತ್ ಸ್ವರೂಪ ಪ್ರತಿಪಾದನಕ್ಷಮಂ ಇತಿ ತಾತ್ಪರ್ಯಾರ್ಥಃ ॥ ೮ ॥**

ಮನೋಮಯಕೋಶದಲ್ಲಿದ್ದು ಮನೋಮಯನೆನಿಸಿರುವ ಸಂಕರ್ಷಣನ ತಲೆ ಮುಂತಾದ ಅವಯವಗಳ ಸ್ಥಾನಗಳನ್ನು 'ತಸ್ಯ ಯಜುರೇವ ಶಿರಃ' ಎಂದು ಮುಂತಾಗಿ ಉಪನಿಷತ್ತು ಹೇಳಿದೆ.

ತಸ್ಯ = ಮನೋಮಯ ಕೋಶದಲ್ಲಿರುವ ಸಂಕರ್ಷಣನ ತಲೆಯು, ಯಜುಃ = ಯಜ್ಞದಲ್ಲಿ ಕೊಟ್ಟ ಆಹುತಿಯನ್ನು ಸ್ವೀಕರಿಸುವ ಕಾರಣದಿಂದ (ಯಜ್ಞಹರಣ) ಯಜುಃ, ಎಂದೆನಿಸಿ ಯಜುರ್ವೇದದಲ್ಲಿದೆ. (ಯಜುರ್ವೇದದಿಂದ ಪ್ರತಿಪಾದ್ಯವಾಗಿದೆ). 'ಯಜುರೇವ' ಎಂದು 'ಏವ' ಶಬ್ದದಿಂದ ಯಜುಃ ಎಂಬ ಶಬ್ದಕ್ಕೆ ಮುಖ್ಯಾರ್ಥವೇ 'ಯಜ್ಞಹರಣ' ಎನ್ನುವುದು, ಎಂದು ಸೂಚಿಸಲಾಗಿದೆ. ಭಕ್ತರು ಮಾಡಿದ ಅರ್ಚನೆಯನ್ನು ಸ್ವೀಕಾರ ಮಾಡುವುದರಿಂದ ಅವನ ಬಲಕೈಗೆ 'ಋಕ್' ಎಂದು ಹೆಸರು. ಅದು ಋಗ್ವೇದ ಪ್ರತಿಪಾದ್ಯವಾಗಿದೆ.

ದೋಷಗಳನ್ನು ತಿದ್ದಿ ಸನ್ಮಾರ್ಗದಲ್ಲಿ ನಡೆಸುವ ಕಾರಣದಿಂದ ಅವನ ಎಡಕೈಗೆ 'ಸಾಮ' ಎಂದು ಹೆಸರು. ಅದು ಸಾಮವೇದ ಪ್ರತಿಪಾದ್ಯವಾಗಿದೆ. ನೂರುಕೋಟಿ ವಿಸ್ತಾರವಾದುದರಿಂದ, ಹಾಗೂ ನಾರಾಯಣ ರೂಪದಿಂದ

ಉಪದೇಶಿಸಲ್ಪಟ್ಟಿರುವ ಕಾರಣದಿಂದಲೂ ಪಂಚರಾತ್ರ ಆಗಮವು 'ಆದೇಶ' ಎನಿಸಿದೆ. ಅದರಿಂದ ಪ್ರತಿಪಾದ್ಯವಾದುದು ಸಂಕರ್ಷಣನ ಮಧ್ಯದೇಹ. (ಆ ಸಮಂತಾತ್ ದೇಶಃ ಯಸ್ಯ = ಆದೇಶಃ, ವಿಸ್ತೃತವಾದುದು. ಆದಿಶ್ಯತೇ ಇತಿ ಆದೇಶಃ = ಉಪದೇಶಿಸಲ್ಪಟ್ಟದ್ದು.)

ಮನೋಮನ ಕಾಲುಗಳೆರಡು ಇತರ ಅಂಗಾಂಗಗಳ ಕೆಳಗಡೆ ಇರುವ ಕಾರಣದಿಂದ ಅಧರ್ವ - ಅಥರ್ವ. ಅದು ಎಲ್ಲ ದೇವತೆಗಳಿಂದ ಶ್ರೇಷ್ಠವಾದುದರಿಂದ - ಅಂಗಿರಸ. ಒಟ್ಟಿನಲ್ಲಿ ಅವನ ಪಾದವು 'ಅಥರ್ವಾಂಗಿರಸ' ಎನಿಸಿ ಅಥರ್ವ-ಆಂಗಿರಸ ಶಾಖೆಗಳಿಂದ (ಅಥರ್ವ ವೇದದಿಂದ) ಪ್ರತಿಪಾದ್ಯ.

ಯಜುರ್ವೇದವೇ ಮೊದಲಾದ ವಾಙ್ಮಯವು ಅವನ ಒಂದೊಂದು ಅವಯವಗಳನ್ನಷ್ಟೇ ಪ್ರತಿಪಾದಿಸಬಹುದು ಎಂದು ಒಟ್ಟು ತಾತ್ಪರ್ಯ. ॥ ೮ ॥

**ಫಲಂ ಚಾಹ - ತದಪ್ಯೇಷ ಇತಿ ॥**

ಮನೋಮಯನ ಜ್ಞಾನದಿಂದಾಗುವ ಫಲವನ್ನು ''ತದಪ್ಯೇಷಃ ಶ್ಲೋಕೋ ಭವತಿ'' ಎಂದು ಉಪನಿಷತ್ತು ಮುಂದೆ ಹೇಳಿದೆ.

**ತದಪ್ಯೇಷಃ ಶ್ಲೋಕೋ ಭವತಿ ।**

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ।**

**ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ ।**

**ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೯ ॥**

ಮನೋಮಯನ ಬಗ್ಗೆ ಹೀಗೊಂದು ಮಂತ್ರವಿದೆ - ಬ್ರಹ್ಮನೆನಿಸಿರುವ ಮನೋಮಯನ ಆನಂದವನ್ನು ಮಾತಿನಿಂದ ಹೇಳಲಾಗದು, ಮನಸ್ಸಿನಿಂದ ಕಲ್ಪಿಸಿಕೊಳ್ಳಲಾಗದು. ಹೀಗೆ ತಿಳಿದವನು ಎಂದೂ ಭಯವಿಲ್ಲದೆ ಮುಕ್ತನಾಗುತ್ತಾನೆ.

ಯಾವ ಪ್ರಾಣಮಯನು ಅನ್ನಮಯನ ಆತ್ಮನಂತೆ ಇದ್ದಾನೋ ಆ ಪ್ರಾಣಮಯನಿಗೆ ಮನೋಮಯನು ಆತ್ಮನಾಗಿದ್ದಾನೆ.

**ತದಪಿ = ತತ್ರಾಪಿ, ಪೂರ್ವೋಕ್ತಾರ್ಥೇಽಪಿ ಇತ್ಯರ್ಥಃ । ಬ್ರಹ್ಮಣಃ = ಮನೋಮಯಕೋಶಸ್ಥಸ್ಯ ಸಂಕರ್ಷಣರೂಪ ಬ್ರಹ್ಮಣಃ ಆನಂದಮ್ । ಭೇದ ಪ್ರತಿನಿಧಿ ವಿಶೇಷಾತ್ ಬ್ರಹ್ಮಣಃ ಇತಿ ಷಷ್ಠೀ ಪ್ರಯೋಗಃ । ಆನಂದರೂಪಂ ಬ್ರಹ್ಮ ವಿದ್ವಾನ್ ನ ಕದಾಚನ ಬಿಭೇತಿ = ಮುಕ್ತೋ ಭವತಿ । ಕಥಂ ವಿದ್ವಾನ್ ಭಯ ಹೀನೋ ಭವತಿ ? ಇತ್ಯತಃ ಮನೋವಾಚಾಂ ಅಗೋಚರತ್ವೇನ ಅಪರಿಚ್ಛಿನ್ನತ್ವೇನ ಇತಿ ಭಾವೇನೋಕ್ತಂ - ಯತೋ ವಾಚ ಇತ್ಯಾದಿ ॥ ಇತಿ ಶಬ್ದಸ್ಯ ಇತ್ಯೇಷ ಶ್ಲೋಕ ಇತಿ ಪೂರ್ವೇಣ ಅನ್ವಯಃ ।**

'ತದಪ್ಯೇಷಃ' ಎಂಬ ಉಪನಿಷತ್ತಿನಲ್ಲಿ (ತತ್-ಅಪಿ-ಏಷಃ) ತತ್ ಎಂದರೆ ತತ್ರ = ಈ ವಿಷಯದಲ್ಲಿ, ಅಂದರೆ, ಮನೋಮಯನ ಕುರಿತು ಎಂದು ಅರ್ಥ.

'ಆನಂದಂ ಬ್ರಹ್ಮಣಃ' ಎಂದರೆ, ಬ್ರಹ್ಮಣಃ = ಮನೋಮಯಕೋಶದಲ್ಲಿ ಇರುವ ಸಂಕರ್ಷಣರೂಪನಾದ ಪರಬ್ರಹ್ಮನ ಆನಂದವನ್ನು, ಎಂದು ಅರ್ಥ. ಆನಂದವೂ ಬ್ರಹ್ಮನೂ ಒಂದೇ ಆದರೂ ಅವೆರಡಕ್ಕೆ ಭೇದದ ಪ್ರತಿನಿಧಿಯಾದ ವಿಶೇಷವಿರುವುದರಿಂದ ''ಬ್ರಹ್ಮನ ಆನಂದ''ಎನ್ನುವುದು ತಪ್ಪಲ್ಲ. ಒಟ್ಟಿನಲ್ಲಿ ಆನಂದರೂಪನಾದ ಮನೋಮಯ ಬ್ರಹ್ಮನನ್ನು ತಿಳಿದವನು, ನ ಕದಾಚನ ಬಿಭೇತಿ = ಮುಕ್ತನಾಗುತ್ತಾನೆ.

ಅವನನ್ನು ಏನೆಂದು ತಿಳಿದರೆ ಭಯವಿಲ್ಲ? ಅವನು ಮನಸ್ಸಿಗಾಗಲೀ ಮಾತಿಗಾಗಲೀ ಸಿಗುವುದಿಲ್ಲ ಎಂದು ತಿಳಿದರೆ ಭಯವಿಲ್ಲ. ಅವನನ್ನು ಹೇಗೆ ತಿಳಿಯಬೇಕೆನ್ನುವುದನ್ನು - ''ಯತೋ ವಾಚೋ ನಿವರ್ತಂತೇ'' ಎಂದು ಉಪನಿಷತ್ತು ತಿಳಿಸುತ್ತದೆ. ಇಲ್ಲಿರುವ 'ಕದಾಚನೇತಿ' ಎಂಬ ಇತಿ ಶಬ್ದವನ್ನು ಶ್ಲೋಕಶಬ್ದದೊಂದಿಗೆ ಸೇರಿಸಿ 'ಇತ್ಯೇಷಃ ಶ್ಲೋಕಃ' ಎಂದು ವಾಕ್ಯವನ್ನು ಹೊಂದಿಸಬೇಕು.

**ಮನೋಮಯ ಸ್ಥಿತಿ ಪ್ರಕಾರಮಾಹ - ತಸ್ಯೇತಿ ॥ ಪ್ರಾಣಮಯಸ್ಯ ಪ್ರದ್ಯುಮ್ನಸ್ಯ, ಏಷಃ = ಮನೋಮಯಃ ಸಂಕರ್ಷಣಃ, ಶಾರೀರ ಆತ್ಮಾ = ದೇಹಿವತ್ ತಿಷ್ಠತೀತ್ಯರ್ಥಃ । ಪೂರ್ವಸ್ಯ = ಅನ್ನರಸಮಯಾಖ್ಯಸ್ಯ ಅನಿರುದ್ಧಸ್ಯ । ಯಃ = ಪ್ರಾಣಮಯಃ ಪ್ರದ್ಯುಮ್ನಃ, ಶಾರೀರ ಆತ್ಮಾ ಅಭವತ್, ತಸ್ಯ ಪ್ರದ್ಯುಮ್ನಸ್ಯ ಇತ್ಯರ್ಥಃ ॥ ೯ ॥**

ಉಪದೇಶಿಸಲ್ಪಟ್ಟಿರುವ ಕಾರಣದಿಂದಲೂ ಪಂಚರಾತ್ರ ಆಗಮವು 'ಆದೇಶ' ಎನಿಸಿದೆ. ಆದರಿಂದ ಪ್ರತಿಪಾದ್ಯವಾದುದು ಸಂಕರ್ಷಣನ ಮಧ್ಯದೇಹ. (ಆ ಸಮಂತಾತ್ ದೇಶಃ ಯಸ್ಯ = ಆದೇಶಃ, ವಿಸ್ತೃತವಾದುದು. ಆದಿಷ್ಯತೇ ಇತಿ ಆದೇಶಃ = ಉಪದೇಶಿಸಲ್ಪಟ್ಟದ್ದು.)

ಮನೋಮನ ಕಾಲುಗಳೆರಡು ಇತರ ಅಂಗಾಂಗಗಳ ಕೆಳಗಡೆ ಇರುವ ಕಾರಣದಿಂದ ಅಥರ್ವ - ಅಥರ್ವ. ಅದು ಎಲ್ಲ ದೇವತೆಗಳಿಂದ ಶ್ರೇಷ್ಠವಾದುದರಿಂದ - ಅಂಗಿರಸ. ಒಟ್ಟಿನಲ್ಲಿ ಅವನ ಪಾದವು 'ಅಥರ್ವಾಂಗಿರಸ' ಎನಿಸಿ ಅಥರ್ವ-ಆಂಗಿರಸ ಶಾಖೆಗಳಿಂದ (ಅಥರ್ವ ವೇದದಿಂದ) ಪ್ರತಿಪಾದ್ಯ.

ಯಜುರ್ವೇದವೇ ಮೊದಲಾದ ವಾಙ್ಮಯವು ಅವನ ಒಂದೊಂದು ಅವಯವಗಳನ್ನಷ್ಟೇ ಪ್ರತಿಪಾದಿಸಬಹುದು ಎಂದು ಒಟ್ಟು ತಾತ್ಪರ್ಯ. ॥ ೮ ॥

**ಫಲಂ ಚಾಹ - ತದಪ್ಯೇಷ ಇತಿ ॥**

ಮನೋಮಯನ ಜ್ಞಾನದಿಂದಾಗುವ ಫಲವನ್ನು ''ತದಪ್ಯೇಷಃ ಶ್ಲೋಕೋ ಭವತಿ'' ಎಂದು ಉಪನಿಷತ್ತು ಮುಂದೆ ಹೇಳಿದೆ.

**ತದಪ್ಯೇಷಃ ಶ್ಲೋಕೋ ಭವತಿ ।**

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ।**

**ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚನೇತಿ ।**

**ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೯ ॥**

ಮನೋಮಯನ ಬಗ್ಗೆ ಹೀಗೊಂದು ಮಂತ್ರವಿದೆ - ಬ್ರಹ್ಮನೆನಿಸಿರುವ ಮನೋಮಯನ ಆನಂದವನ್ನು ಮಾತಿನಿಂದ ಹೇಳಲಾಗದು, ಮನಸ್ಸಿನಿಂದ ಕಲ್ಪಿಸಿಕೊಳ್ಳಲಾಗದು. ಹೀಗೆ ತಿಳಿದವನು ಎಂದೂ ಭಯವಿಲ್ಲದೆ ಮುಕ್ತನಾಗುತ್ತಾನೆ.

ಯಾವ ಪ್ರಾಣಮಯನು ಅನ್ನಮಯನ ಆತ್ಮನಂತೆ ಇದ್ದಾನೋ ಆ ಪ್ರಾಣಮಯನಿಗೆ ಮನೋಮಯನು ಆತ್ಮನಾಗಿದ್ದಾನೆ.

**ತದಪಿ = ತತ್ರಾಪಿ, ಪೂರ್ವೋಕ್ತಾರ್ಥೇಽಪಿ ಇತ್ಯರ್ಥಃ । ಬ್ರಹ್ಮಣಃ = ಮನೋಮಯಕೋಶಸ್ಥಸ್ಯ ಸಂಕರ್ಷಣರೂಪ ಬ್ರಹ್ಮಣಃ ಆನಂದಮ್ । ಭೇದ ಪ್ರತಿನಿಧಿ ವಿಶೇಷಾತ್ ಬ್ರಹ್ಮಣಃ ಇತಿ ಷಷ್ಠೀ ಪ್ರಯೋಗಃ । ಆನಂದರೂಪಂ ಬ್ರಹ್ಮ ವಿದ್ವಾನ್ ನ ಕದಾಚನ ಬಿಭೇತಿ = ಮುಕ್ತೋ ಭವತಿ । ಕಥಂ ವಿದ್ವಾನ್ ಭಯ ಹೀನೋ ಭವತಿ ? ಇತ್ಯತಃ ಮನೋವಾಚಾಂ ಅಗೋಚರತ್ವೇನ ಅಪರಿಚ್ಛಿನ್ನತ್ವೇನ ಇತಿ ಭಾವೇನೋಕ್ತಂ - ಯತೋ ವಾಚ ಇತ್ಯಾದಿ ॥ ಇತಿ ಶಬ್ದಸ್ಯ ಇತ್ಯೇಷ ಶ್ಲೋಕ ಇತಿ ಪೂರ್ವೇಣ ಅನ್ವಯಃ ।**

'ತದಪ್ಯೇಷಃ' ಎಂಬ ಉಪನಿಷತ್ತಿನಲ್ಲಿ (ತತ್-ಅಪಿ-ಏಷಃ) ತತ್ ಎಂದರೆ ತತ್ರ = ಈ ವಿಷಯದಲ್ಲಿ, ಅಂದರೆ, ಮನೋಮಯನ ಕುರಿತು ಎಂದು ಅರ್ಥ.

'ಆನಂದಂ ಬ್ರಹ್ಮಣಃ' ಎಂದರೆ, ಬ್ರಹ್ಮಣಃ = ಮನೋಮಯಕೋಶದಲ್ಲಿ ಇರುವ ಸಂಕರ್ಷಣರೂಪನಾದ ಪರಬ್ರಹ್ಮನ ಆನಂದವನ್ನು, ಎಂದು ಅರ್ಥ. ಆನಂದವೂ ಬ್ರಹ್ಮನೂ ಒಂದೇ ಆದರೂ ಅವೆರಡಕ್ಕೆ ಭೇದದ ಪ್ರತಿನಿಧಿಯಾದ ವಿಶೇಷವಿರುವುದರಿಂದ ''ಬ್ರಹ್ಮನ ಆನಂದ''ಎನ್ನುವುದು ತಪ್ಪಲ್ಲ. ಒಟ್ಟಿನಲ್ಲಿ ಆನಂದರೂಪನಾದ ಮನೋಮಯ ಬ್ರಹ್ಮನನ್ನು ತಿಳಿದವನು, ನ ಕದಾಚನ ಬಿಭೇತಿ = ಮುಕ್ತನಾಗುತ್ತಾನೆ.

ಅವನನ್ನು ಏನೆಂದು ತಿಳಿದರೆ ಭಯವಿಲ್ಲ? ಅವನು ಮನಸ್ಸಿಗಾಗಲೀ ಮಾತಿಗಾಗಲೀ ಸಿಗುವುದಿಲ್ಲ ಎಂದು ತಿಳಿದರೆ ಭಯವಿಲ್ಲ. ಅವನನ್ನು ಹೇಗೆ ತಿಳಿಯಬೇಕೆನ್ನುವುದನ್ನು - ''ಯತೋ ವಾಚೋ ನಿವರ್ತಂತೇ'' ಎಂದು ಉಪನಿಷತ್ತು ತಿಳಿಸುತ್ತದೆ. ಇಲ್ಲಿರುವ 'ಕದಾಚನೇತಿ' ಎಂಬ ಇತಿ ಶಬ್ದವನ್ನು ಶ್ಲೋಕಶಬ್ದದೊಂದಿಗೆ ಸೇರಿಸಿ 'ಇತ್ಯೇಷಃ ಶ್ಲೋಕಃ' ಎಂದು ವಾಕ್ಯವನ್ನು ಹೊಂದಿಸಬೇಕು.

**ಮನೋಮಯ ಸ್ಥಿತಿ ಪ್ರಕಾರಮಾಹ - ತಸ್ಯೇತಿ ॥ ಪ್ರಾಣಮಯಸ್ಯ ಪ್ರದ್ಯುಮ್ನಸ್ಯ, ಏಷಃ = ಮನೋಮಯಃ ಸಂಕರ್ಷಣಃ, ಶಾರೀರ ಆತ್ಮಾ = ದೇಹಿವತ್ ತಿಷ್ಠತೀತ್ಯರ್ಥಃ । ಪೂರ್ವಸ್ಯ = ಅನ್ನರಸಮಯಾಖ್ಯಸ್ಯ ಅನಿರುದ್ಧಸ್ಯ । ಯಃ = ಪ್ರಾಣಮಯಃ ಪ್ರದ್ಯುಮ್ನಃ, ಶಾರೀರ ಆತ್ಮಾ ಅಭವತ್, ತಸ್ಯ ಪ್ರದ್ಯುಮ್ನಸ್ಯ ಇತ್ಯರ್ಥಃ ॥ ೯ ॥**

ಈ ದೇಹದಲ್ಲಿ ಮನೋಮಯನು ಇರುವ ಕ್ರಮವನ್ನು ''ತಸ್ಯೈಷ ಏವ'' ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ಹೇಳಲಾಗಿದೆ. ಅದರ ಅರ್ಥ - ತಸ್ಯ ಎಂದರೆ ಪ್ರಾಣಮಯನಾದ ಹಿಂದೆ ಹೇಳಿದ ಪ್ರದ್ಯುಮ್ನನಿಗೆ, ಏಷಃ = ಮನೋಮಯ ಸಂಕರ್ಷಣನು, ಶಾರೀರ ಆತ್ಮಾ = ದೇಹಿಯಾಗಿದ್ದಾನೆ, ಎಂದು.

'ಯಃ ಪೂರ್ವಸ್ಯ' ಎಂದರೆ - ಪೂರ್ವಸ್ಯ = ಆರಂಭದಲ್ಲಿ ಪ್ರಸ್ತುತನಾದ ಅನ್ನರಸಮಯನಾದ ಅನಿರುದ್ಧನಿಗೆ, ಯಃ = ಯಾವ ಪ್ರಾಣಮಯ ಪ್ರದ್ಯುಮ್ನನು, ದೇಹಿಯಂತೆ ಇದ್ದಾನೋ, ಅಂತಹ ಪ್ರದ್ಯುಮ್ನನಿಗೆ (ಏಷಃ ಶಾರೀರ ಆತ್ಮಾ = ಸಂಕರ್ಷಣನು ದೇಹಿಯಂತೆ ಇದ್ದಾನೆ) ಎಂದು ಅರ್ಥ. ॥ ೯ ॥

ವಿಜ್ಞಾನಮಯ ಪ್ರಕರಣ.

**ತಸ್ಮಾದ್ ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂತರ ಆತ್ಮಾ ವಿಜ್ಞಾನಮಯಃ। ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ । ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ । ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ ॥ ೧೦ ॥**

ಹಿಂದೆ ಪ್ರಸ್ತುತನಾದ ಆ ಮನೋಮಯ ಸಂಕರ್ಷಣನಿಗಿಂತ ಭಿನ್ನನಾಗಿದ್ದು ಅವನೊಳಗೆ ಇರುವವನು, ವಿಜ್ಞಾನಮಯಕೋಶದಲ್ಲಿದ್ದು ವಿಜ್ಞಾನಮಯ-ನಾಮಕನಾದ ವಾಸುದೇವನು. ಈ ವಿಜ್ಞಾನಮಯ ವಾಸುದೇವನು ಮನೋಮಯ ಸಂಕರ್ಷಣನಲ್ಲಿ ಎಡೆಬಿಡದೆ ತುಂಬಿರುತ್ತಾನೆ.

ವಾಸುದೇವನು ಪುರುಷಾಕಾರದಲ್ಲಿದ್ದಾನೆ. ಅದಕ್ಕನುಗುಣವಾಗಿ ಮನೋ-ಮಯನೂ ಪುರುಷಾಕಾರನಾಗಿರುವನು.

ಈ ವಿಜ್ಞಾನಮಯ ವಾಸುದೇವನ ಶಿರಸ್ಸು, ವೇದಗಳನ್ನು ಧರಿಸಿರುವ ಕಾರಣದಿಂದ, ಶ್ರದ್ಧಾ ಎಂದೆನಿಸಿ ಶ್ರದ್ಧಾ ಗುಣದಲ್ಲಿದೆ. ಏವ ಶಬ್ದವು ಹಿಂದಿನಂತೆಯೇ, ಇದೇ ಅರ್ಥವು ಶ್ರದ್ಧಾ ಶಬ್ದಕ್ಕೆ ಮುಖ್ಯವಾದುದು, ಎಂದು

ತಿಳಿಸುತ್ತದೆ. ಜ್ಞಾನಪ್ರದವಾದುದರಿಂದ ವಾಸುದೇವನ ಬಲಕೈಗೆ ಋತ ಎಂದು ಹೆಸರು. ಅದು ಜ್ಞಾನಸಂತತಿಯಲ್ಲಿದೆ. ಸತ್ಯ ಶಬ್ದಕ್ಕೆ ಸಜ್ಜನರಿಗೆ ನಿಯಾಮಕವೆಂದು ಹೆಸರು. ವಾಸುದೇವನ ಎಡಕೈ ಸಜ್ಜನರಿಗೆ ನಿಯಾಮಕವಾಗಿ ಸತ್ಯವಚನದಲ್ಲಿ ಸನ್ನಿಹಿತವಾಗಿದೆ. ಸಕಲ ಲೋಕಗಳ ಯೋಗವು (ಸಂಬಂಧವು) ಇರುವುದರಿಂದ ವಾಸುದೇವನ ಮಧ್ಯದೇಹಕ್ಕೆ ಯೋಗವೆಂದು ಹೆಸರು. ಅದು ಯೋಗದಲ್ಲಿದೆ. ಯೋಗವೆಂದರೆ ಮನಸ್ಸಿನ ಯೋಗ. ಮನಸ್ಸನ್ನು ಒಂದು ವಸ್ತುವಿನಲ್ಲಿ ಏಕಾಗ್ರಗೊಳಿಸುವುದು. ವಾಸುದೇವನ ಪಾದಗಳು ಮಹನೀಯವಾದ ಕಾರಣ (ಪೂಜ್ಯವಾದ ನಿಮಿತ್ತದಿಂದ) 'ಮಹಃ' ಎನಿಸಿವೆ. ಅದು ಭಗವದಾರಾಧನಾ ಕ್ರಿಯೆಯಲ್ಲಿ ಸನ್ನಿಹಿತವಾಗಿದೆ.

**ಪ್ರಾಗ್ವದ್ ವ್ಯಾಖ್ಯಾ ಧ್ಯೇಯಾ । ವಿಶೇಷ ಜ್ಞಾನ ಪ್ರಾಚುರ್ಯೇಣ ನಿಮಿತ್ತೇನ ವಿಜ್ಞಾನಮಯ ಶಬ್ದಾಭಿಧೇಯಃ ವಿಜ್ಞಾನಮಯಕೋಶಸ್ಥಃ ವಾಸುದೇವಃ । ತೇನ = ವಿಜ್ಞಾನಮಯಾಖ್ಯೇನ ವಾಸುದೇವೇನ, ಏಷಃ = ಮನೋಮಯಃ ನಿಶ್ಛಿದ್ರತ್ವೇನ ಪೂರ್ಣಃ । 'ಸ ವಾ' ಇತ್ಯಾದಿ ಪ್ರಾಗ್ವತ್ । ಅನ್ವಯಂ ಪುರುಷವಿಧಃ ಇತ್ಯನಂತರಂ ತತ ಉದ್ಭೂತಃ ಇತ್ಯಪಿ ಗ್ರಾಹ್ಯಮ್ ।**

'ತಸ್ಮಾದ್ವಾ' ಇತ್ಯಾದಿ ವಾಕ್ಯಕ್ಕೆ ಮನೋಮಯ ಪ್ರಕರಣದಂತೆಯೇ ವ್ಯಾಖ್ಯಾನ ಮಾಡಬೇಕು. ವಿಜ್ಞಾನಮಯನೆಂದರೆ ವಿಜ್ಞಾನಮಯ ಕೋಶದಲ್ಲಿರುವ ವಾಸುದೇವ. ಅವನಿಗೆ ಎಲ್ಲ ವಸ್ತುಗಳ ವಿಶೇಷ ಜ್ಞಾನವಿದೆ. ಆದ್ದರಿಂದ ವಿಜ್ಞಾನಮಯ ಎಂದು ಹೆಸರು.

'ತೇನೈಷ ಪೂರ್ಣಃ' ಎಂಬಲ್ಲಿ ತೇನ = ವಿಜ್ಞಾನಮಯನಾಮಕನಾದ ವಾಸುದೇವನಿಂದ, ಏಷಃ = ಮನೋಮಯ ಸಂಕರ್ಷಣನು ಎಡೆಬಿಡದೆ ಪೂರ್ಣನಾಗಿರುತ್ತಾನೆ.

'ಸ ವಾ ಏಷ' ಎಂಬ ವಾಕ್ಯಕ್ಕೆ ಹಿಂದಿನಂತೆಯೇ ಅರ್ಥ. ವಿಜ್ಞಾನಮಯ ಪುರುಷಾಕಾರದಲ್ಲಿದ್ದಾನೆ. ಅದಕ್ಕನುಗುಣವಾಗಿ ಅವನ ಶರೀರದಂತಿರುವ ಮನೋಮಯನೂ ಪುರುಷಾಕಾರದಲ್ಲಿದ್ದಾನೆ, ಎಂದು. 'ಅನ್ವಯಂ ಪುರುಷ ವಿಧಃ' ಎನ್ನುವುದು ಅಷ್ಟೇ ಅಲ್ಲ, ವಿಜ್ಞಾನಮಯನಿಂದ ಮನೋಮಯನು ಆವಿರ್ಭವಿಸಿದ್ದಾನೆ ಎಂದೂ ತಿಳಿಯಬೇಕು.

**ತಸ್ಯಾವಯವ ಸ್ಥಾನಾನ್ಯಾಹ - ತಸ್ಯ ಶ್ರದ್ಧೈವೇತಿ ॥ ತಸ್ಯ = ವಿಜ್ಞಾನ ಮಯಸ್ಯ ವಾಸುದೇವಸ್ಯ, ಶಿರಃ ಶ್ರುತಿಧರ್ತೃತ್ವಯೋಗೇನ ಶದ್ಧಾನಾಮಕಂ, ಶ್ರದ್ಧಾಸ್ಥಮ್ । ಏವಕಾರಾರ್ಥಃ ಪ್ರಾಗ್ವತ್ ।**

**ಜ್ಞಾನದಾತೃತ್ವಯೋಗೇನ ಋತನಾಮಕಃ ಋತಸ್ಥಃ ದಕ್ಷಿಣ ಬಾಹುಃ । ಸತಾಂ ನಿಯಾಮಕತ್ವಹೇತುನಾ ಸತ್ಯನಾಮಕಃ ಸತ್ಯಸ್ಥಃ ಸವ್ಯಬಾಹುಃ । ಸರ್ವಲೋಕ ಯುಕ್ತತ್ವಹೇತುನಾ ಯೋಗನಾಮಕಃ, ಯೋಗಸ್ಥಃ ಮಧ್ಯದೇಹಃ । ಮಹನೀಯತ್ವತಃ ಮಹರ್ನಾಮಕೌ ಪುಚ್ಛಮಿವ ಅಂತಿಮೌ, ಪ್ರತಿಷ್ಠಾ - ಪ್ರತಿಷ್ಠೌ = ಪಾದೌ ಇತಿ । ಶ್ರದ್ಧಾ ಋತಂ ಇತ್ಯಾದಿ ವಿಜ್ಞಾನಮಯಾಖ್ಯ ವಾಸುದೇವಾಧೀನಂ ಇತಿ ತಾತ್ಪರ್ಯಾರ್ಥಃ ।**

ವಿಜ್ಞಾನಮಯ ವಾಸುದೇವನ ತಲೆ ಮುಂತಾದ ಸ್ಥಾನಗಳನ್ನು ''ತಸ್ಯ ಶ್ರದ್ಧೈವ ಶಿರಃ'' ಎಂದು ಮುಂತಾಗಿ ಉಪನಿಷತ್ತು ಹೇಳಿದೆ. ತಸ್ಯ = ವಿಜ್ಞಾನ- ಮಯನಾದ ವಾಸುದೇವನ ತಲೆಯು ಶ್ರದ್ಧಾ ಎಂಬ ಹೆಸರಿನಿಂದ ಶ್ರದ್ಧಾ ಗುಣದಲ್ಲಿದೆ. ವೇದಗಳನ್ನು ಮರೆಯದೆ ತಿಳಿದಿರುವ ಕಾರಣ ವಾಸುದೇವನ ತಲೆ ಶ್ರದ್ಧಾ ಎನಿಸಿದೆ. 'ಏವ' ಶಬ್ದವು ಹಿಂದಿನಂತೆಯೇ, ಈ ಅರ್ಥವೇ ಶ್ರದ್ಧಾಶಬ್ದಕ್ಕೆ ಮುಖ್ಯವಾದುದು ಎಂದು ಸೂಚಿಸುತ್ತದೆ.

ಋತ ಎಂದರೆ ಯಥಾರ್ಥಜ್ಞಾನ. ಅಂತಹ ಜ್ಞಾನ ಪ್ರದವಾದುದರಿಂದ ಹಾಗೂ ಆ ಜ್ಞಾನಸ್ಥವಾದುದರಿಂದ ವಾಸುದೇವನ ಬಲ ತೋಳು ಋತ ಎನಿಸಿದೆ. ಸಜ್ಜನವೃಂದಕ್ಕೆ ನಿಯಾಮಕನಾಗಿ ಅವರಲ್ಲಿ ಸನ್ನಿಹಿತನಾದುದರಿಂದ ವಾಸುದೇವನ ಎಡತೋಳು ಸತ್ಯವೆನಿಸಿದೆ. ಸಕಲ ಲೋಕಗಳಲ್ಲಿ ಇರುವುದರಿಂದ ವಾಸುದೇವನ ಮಧ್ಯದೇಹಕ್ಕೆ ಲೋಕ ಎಂದು ಹೆಸರು. ಅದು ಧ್ಯಾನ ಯೋಗದಲ್ಲಿ ಸನ್ನಿಹಿತವೂ ಆಗಿದೆ. ಆರಾಧ್ಯವಾದುದರಿಂದ ಅವನ ಪಾದಗಳು 'ಮಹಃ' ಎನಿಸಿವೆ. ಅವನ್ನು ಉಪನಿಷತ್ತು ಪುಚ್ಛ ಎಂದಿದೆ. ಪುಚ್ಛ ಎಂದರೆ ಬಾಲ. ಕಾಲು ಬಾಲದಂತೆ ದೇಹದಕೊನೆಯಲ್ಲಿದೆ ಎಂದರ್ಥ. ಒಟ್ಟಿನಲ್ಲಿ ಶ್ರದ್ಧಾಗುಣ, ಯಥಾರ್ಥ ಜ್ಞಾನ ಇವೆಲ್ಲವೂ ವಾಸುದೇವನ ಅಧೀನವಾಗಿವೆ ಎಂದು ಭಾವ. ॥ ೧೦ ॥

**ತದೇವ ಶ್ಲೋಕೇನ ವ್ಯನಕ್ತಿ - ವಿಜ್ಞಾನಮಿತಿ ॥**

ಈವರೆಗೆ ಹೇಳಿದ್ದನ್ನೇ 'ತದಪ್ಯೇಷಃ' ಎಂದು ಮುಂತಾಗಿ ಮುಂದಿನ ಭಾಗದಲ್ಲಿ ಮಂತ್ರ ಬದ್ಧವಾಗಿ ವರ್ಣಿಸಲಾಗಿದೆ.

ತದಪ್ಯೇಷ ಶ್ಲೋಕೋ ಭವತಿ ।

ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ ।

ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮ ಚೇದ್ ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ ಸಮಶ್ನುತ ಇತಿ ।

ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೧೧ ॥

ವಿಜ್ಞಾನಮಯ ಕೋಶದಲ್ಲಿರುವ ವಾಸುದೇವನು ಯಾಗ ಮಾಡುವ ಯಜಮಾನ, ಪುರೋಹಿತರು, ಮುಂತಾದವರಲ್ಲಿದ್ದು ಯಜ್ಞಾದಿಕರ್ಮಗಳನ್ನು ಮಾಡಿಸುತ್ತಾನೆ. ವಾಸುದೇವನನ್ನು ಆದ್ಯ ಬ್ರಹ್ಮನೆಂದು ದೇವತೆಗಳು ಆರಾಧಿಸುತ್ತಾರೆ. ಗುಣಪೂರ್ಣನಾದ ಈ ವಿಜ್ಞಾನಮಯ ವಾಸುದೇವನನ್ನು ಸಾಕ್ಷಾತ್ಕರಿಸಿಕೊಂಡರೆ ಎಂದೂ ಅಂತಹವನಿಗೆ ಜ್ಞಾನಲೋಪವಾಗದು. ಸಕಲ ಪಾಪಗಳನ್ನೂ ಕಳೆದುಕೊಂಡು ಸಕಲ ಅಭೀಷ್ಟಗಳನ್ನು ಹೊಂದುತ್ತಾನೆ.

ಹಿಂದಿನ ಪ್ರಾಣಮಯನಿಗೆ ಆತ್ಮನಂತಿರುವ ಮನೋಮಯ ಸಂಕರ್ಷಣನಿಗೆ ಈ ವಿಜ್ಞಾನಮಯನು ದೇಹದೊಳಗಿನ ಆತ್ಮನಂತಿದ್ದಾನೆ.

ವಿಜ್ಞಾನಮಯ ಕೋಶಗತಃ ತನ್ನಾಮಾ ವಾಸುದೇವಃ, ಯಜ್ಞಂ = ಸಮುದಾಯಾಭಿಪ್ರಾಯಂ, ಯಜಮಾನ ಋತ್ವಿಗಾದಿಷು ಸರ್ವತ್ರ ಸ್ಥಿತ್ವಾ ಯಜ್ಞಾನ್, ತದಂಗಕರ್ಮಾಣ್ಯಾಪಿ ಚ ತನುತೇ ಇತ್ಯರ್ಥಃ । ವಿಜ್ಞಾನಂ = ವಿಜ್ಞಾನಮಯಂ ವಾಸುದೇವಂ, ಬ್ರಹ್ಮ = ಗುಣಪೂರ್ಣಂ ಚೇತ್ ವೇದ, ವೇದಚೇತ್ = ಸಾಕ್ಷಾತ್ಕರೋತಿ ಚೇತ್ ಇತ್ಯರ್ಥಃ । ತಸ್ಮಾತ್ = ಜ್ಞಾನಾತ್, ನ ಪ್ರಮಾದ್ಯತಿ, ನ ವಿಸ್ಮರತಿ ಚ ಇತ್ಯರ್ಥಃ । ಶೇಷಂ ಸ್ಪಷ್ಟಮ್, ತಸ್ಯೈಷ ಇತ್ಯಾದಿ ಪ್ರಾಗ್ವತ್ ॥ ೧೧ ॥

ವಿಜ್ಞಾನಮಯ ಕೋಶದಲ್ಲಿರುವ, ವಿಜ್ಞಾನಮಯ ಹೆಸರಿನ ವಾಸುದೇವನು, 'ಯಜ್ಞ' ಶಬ್ದವು ಸಮುದಾಯೈಕವಚನ 'ಯಜ್ಞಗಳನ್ನು' ಎಂದು ಅರ್ಥ, ಯಜ್ಞ ಮಾಡಿಸುವ ಯಜಮಾನನಲ್ಲೂ, ಪುರೋಹಿತರಲ್ಲೂ ಸನ್ನಿಹಿತನಾಗಿದ್ದು ಯಜ್ಞಗಳನ್ನು ಇತರ ಕ್ರಿಯೆಗಳನ್ನೂ ಮಾಡುತ್ತಾನೆ, ಎಂದರ್ಥ.

'ವಿಜ್ಞಾನಂ ಬ್ರಹ್ಮ ಚೇದ್ವೇದ' ಎಂಬಲ್ಲಿ ವಿಜ್ಞಾನಂ = ವಿಜ್ಞಾನಮಯ ವಾಸುದೇವನನ್ನು, ಬ್ರಹ್ಮ = ಗುಣಪೂರ್ಣನನ್ನಾಗಿ, ಚೇದ್ವೇದ-ವೇದಚೇತ್ = ಪ್ರತ್ಯಕ್ಷೀಕರಿಸಿಕೊಂಡರೆ ಎಂದರ್ಥ.

'ತಸ್ಮಾಚ್ಚೇನ್ನ ಪ್ರಮಾದ್ಯತಿ' ಎಂಬಲ್ಲಿ ತಸ್ಮಾತ್ = ವಾಸುದೇವನ ಜ್ಞಾನದಿಂದ ನ ಪ್ರಮಾದ್ಯತಿ = ವಿಸ್ಮರಣೆಯುಳ್ಳವನಾಗುವುದಿಲ್ಲ ಎಂದು ಅರ್ಥ. ಉಳಿದಂತೆ ಉಪನಿಷತ್ತು ಸ್ಪಷ್ಟವಾಗಿದೆ.

'ತಸ್ಯೈಷ ಏವ' ಇತ್ಯಾದಿ ವಾಕ್ಯಗಳಿಗೆ ಹಿಂದಿನಂತೆಯೇ ಅರ್ಥವನ್ನು ಹೇಳಬೇಕು. ॥ ೧೧ ॥

### ಆನಂದಮಯ ಪ್ರಕರಣ

**ದೇಶ - ಕಾಲ - ಗುಣಾಪರಿಚ್ಛಿನ್ನತ್ವರೂಪ-ಅನಂತತ್ವಂ ಲಕ್ಷಣ ವಾಕ್ಯಸ್ಥ ಅನಂತಪದಸ್ಯ ಅರ್ಥಃ ಇತ್ಯುಕ್ತಮ್ । ತತ್ ಕುತಃ ಪ್ರಮಾಣಾತ್ ಪ್ರತಿಪತ್ತವ್ಯಮ್ ? ಇತ್ಯತಃ ಪೂರ್ಣಾನಂದತ್ವ ಹೇತುನಾ ಇತಿ ಭಾವೇನ ಆಹ — 'ತಸ್ಮಾದ್ವಾ' ಇತ್ಯಾದಿನಾ ॥**

'ಸತ್ಯಂ ಜ್ಞಾನಂ' ಇತ್ಯಾದಿ ಆರಂಭದ ಲಕ್ಷಣವಾಕ್ಯದಲ್ಲಿರುವ ಅನಂತ ಪದಕ್ಕೆ ದೇಶ-ಕಾಲ-ಗುಣಗಳ ಪರಿಮಿತಿ ಇಲ್ಲದವನು ಎಂದು ಅರ್ಥ. ಬ್ರಹ್ಮನಲ್ಲಿ ಇಂತಹ ಮಹತ್ವ ಇದೆ ಎನ್ನಲು ಏನು ಆಧಾರ, ಯಾವ ಆಧಾರದಿಂದ ಅದನ್ನು ತಿಳಿದುಕೊಳ್ಳಬಹುದು? ಎಂದರೆ, ಅದಕ್ಕೆ ಬ್ರಹ್ಮನು ಆನಂದಪೂರ್ಣನಾಗಿರುವುದೇ ಕಾರಣ. ಅವನು ಆನಂದಮಯನಾದುದರಿಂದ 'ಅನಂತ' ಎನಿಸಿದ್ದಾನೆ. ಇದನ್ನು ಮುಂದಿನ ಆನಂದಮಯ ಪ್ರಕರಣದಲ್ಲಿ ತಿಳಿಸಲಾಗಿದೆ.

**ತಸ್ಮಾದ್ವಾ ಏತಸ್ಮಾದ್ ವಿಜ್ಞಾನಮಯಾತ್ । ಅನ್ಯೋಽನ್ತರ ಆತ್ಮಾಽನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷವಿಧತಾಮ್ । ಅನ್ವಯಂ ಪುರುಷವಿಧಃ ।**

**ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ ।**

ಹಿಂದೆ ನಿರೂಪಿಸಿದ ವಿಜ್ಞಾನಮಯಕೋಶಸ್ಥನಾದ ವಿಜ್ಞಾನಮಯ ವಾಸುದೇವನಿಗಿಂತ ಭಿನ್ನನಾದ, ಅವನೊಳಗೆ ವ್ಯಾಪಿಸಿರುವವನು ಆನಂದಮಯಕೋಶಸ್ಥನಾದ ಆನಂದಮಯ ನಾಮಕನಾದ ನಾರಾಯಣನು. ಈ ಆನಂದಮಯ ನಾರಾಯಣನಿಂದ ವಿಜ್ಞಾನಮಯ ವಾಸುದೇವನು ನಿಚ್ಛಿದ್ರವಾಗಿ ತುಂಬಿದ್ದಾನೆ. ಈ ನಾರಾಯಣನು ಪುರುಷಾಕಾರನಾಗಿದ್ದಾನೆ. ಅವನ ಪುರುಷಾಕಾರಕ್ಕೆ ಅನುಗುಣವಾಗಿ ವಾಸುದೇವನೂ ಪುರುಷಾಕಾರನಾಗಿದ್ದಾನೆ, ಅವನಿಂದ ಆವಿರ್ಭೂತನಾಗಿದ್ದಾನೆ ಕೂಡ.

ಈ ಆನಂದಮಯ ನಾರಾಯಣನ ತಲೆ ಪ್ರಿಯ ಎನಿಸಿದ್ದು ಪರೋಪಕಾರದಿಂದ ಉಂಟಾದ 'ಪ್ರಿಯ' ಎಂಬ ಸುಖದಲ್ಲಿ ಸನ್ನಿಹಿತವಾಗಿದೆ. ಅವನ ಬಲಗೈಯು ಮೋದವೆನಿಸಿದ್ದು ವಿಷಯವಸ್ತುಗಳ ಭೋಗದಿಂದಾಗುವ ಸುಖದಲ್ಲಿದೆ. ಅವನ ಎಡಗೈಯು ಪ್ರಮೋದವೆನಿಸಿದ್ದು ಸಾತ್ವಿಕವಾದ ವಿಷಯಗಳ ಭೋಗದಿಂದಾಗುವ ಸುಖದಲ್ಲಿದೆ. ಮಧ್ಯದೇಹವು ಆನಂದನಾಮಕವಾಗಿ ಜೀವರ ಸ್ವರೂಪಾನಂದದಲ್ಲಿದೆ. ಕಾಲುಗಳು ಬ್ರಹ್ಮವೆನಿಸಿ ಮುಖ್ಯಪ್ರಾಣನಲ್ಲಿವೆ.

**ಪ್ರಾಗ್ವದ್ ವ್ಯಾಖ್ಯಾ । ಆನಂದ ಪ್ರಾಚುರ್ಯ ಹೇತುನಾ ಆನಂದಮಯನಾಮಕಃ ಆನಂದಮಯಕೋಶಸ್ಥಃ ನಾರಾಯಣಃ ತಿಷ್ಠತೀತ್ಯರ್ಥಃ । ತೇನೈಷ ಪೂರ್ಣ ಇತ್ಯಾದಿ ಪ್ರಾಗ್ವತ್ । ತದುದ್ಭೂತ ಇತ್ಯಪಿ ಗ್ರಾಹ್ಯಮ್ ।**

**ತಸ್ಯ = ಆನಂದಮಯ ನಾಮ್ನೋ ನಾರಾಯಣಸ್ಯ ಶಿರಃ, ಪ್ರಿಯಮೇವ = ಪರೈಃ ಪ್ರಾಪ್ಯತ್ವ ಹೇತುನಾ ಪ್ರಿಯನಾಮಕಮ್, ಉಪಕಾರಜ ಪ್ರಿಯಶಬ್ದಿತಸುಖೇ ಸ್ಥಿತಮ್ । ಮೋದತೇ ಇತಿ ವ್ಯುತ್ಪತ್ತ್ಯಾ ಮೋದನಾಮಕೋ ದಕ್ಷಿಣಬಾಹುಃ ವಿಷಯಜ ಮೋದನಾಮಕೇ ಸುಖೇ ತಿಷ್ಠತಿ ಇತ್ಯರ್ಥಃ । ಪ್ರಕರ್ಷೇಣ ಮೋದತೇ ಇತಿ ವ್ಯುತ್ಪತ್ತ್ಯಾ ಪ್ರಮೋದನಾಮಾ ಸವ್ಯ ಬಾಹುಃ ಪ್ರಕೃಷ್ಟವಿಷಯಜೇ ಪ್ರಮೋದ ನಾಮಕೇ ಸುಖೇ ತಿಷ್ಠತಿ ಇತ್ಯರ್ಥಃ । ಆತತತ್ವಹೇತುನಾ ಆತ್ಮಾ= ಮಧ್ಯದೇಹಃ ಸ್ವರೂಪಾನಂದೇ ತಿಷ್ಠತಿ ಇತ್ಯರ್ಥಃ । ಸೃಷ್ಟ್ಯಾ ಜಗದ್ ಬೃಂಹಣ ಹೇತುನಾ ಬ್ರಹ್ಮನಾಮಕೌ ಪುಚ್ಛಮಿವ ಸ್ಥಿತೌ ಪ್ರತಿಷ್ಠಾ-ಪ್ರತಿಷ್ಠೌ = ಪಾದೌ, ಬ್ರಹ್ಮಾಖ್ಯ ಪ್ರಧಾನವಾಯೂ ತಿಷ್ಠತಃ ಇತ್ಯರ್ಥಃ ।**

**ಆನಂದಮಯಕೋಶಃ, ಪ್ರಿಯಮೋದಾದಿ ಸುಖವಿಶೇಷಾಃ ವಾಯುಶ್ಚ ಇತ್ಯೇತೇ ಸರ್ವೇ ಆನಂದಮಯಸ್ಥ ನಾರಾಯಣಾಧೀನಾಃ ಇತಿ ತಾತ್ಪರ್ಯಮ್ ।**

**ಸೂತ್ರಭಾಷ್ಯೇ ತು ಆನಂದಮಯಾಖ್ಯೋ ನಾರಾಯಣಃ ಪುನಃ ನಾರಾಯಣಾದಿರೂಪೇಣ ಪಂಚಧಾ ಭಿನ್ನಃ ಶಿರಃ ಪ್ರಭೃತ್ಯಾತ್ಮನಾ ತಿಷ್ಠತೀತ್ಯುಕ್ತಮ್ ।**

'ತಸ್ಮಾದ್ವಾ' ಇತ್ಯಾದಿ ಉಪನಿಷತ್ತಿಗೆ ಹಿಂದಿನ ಪ್ರಕರಣದಂತೆಯೇ ಅರ್ಥ ಹೇಳಬೇಕು. ಪೂರ್ಣವಾದ ಆನಂದವಿರುವುದರಿಂದ ಆನಂದನಾಮಕನಾಗಿ ಆನಂದಮಯ ಕೋಶದಲ್ಲಿ ನಾರಾಯಣ ಎಂಬ ಭಗವಂತನ ರೂಪವಿದೆ. 'ತೇನೈಷಪೂರ್ಣಃ' ಎಂಬುದಕ್ಕೆ ಹಿಂದಿನಂತೆಯೇ ಅರ್ಥ. ಆನಂದಮಯನಿಂದ ವಿಜ್ಞಾನಮಯನು ಪೂರ್ಣನಾಗಿದ್ದಾನೆ. ಅಷ್ಟೇ ಅಲ್ಲ, ಆನಂದಮಯರೂಪದಿಂದ ವಿಜ್ಞಾನಮಯರೂಪವು ಆವಿರ್ಭವಿಸಿದೆ, ಎಂದೂ ತಿಳಿಯಬೇಕು.

ಈ ಆನಂದಮಯನಾಮಕ ನಾರಾಯಣನ ತಲೆಯು ಪ್ರಿಯ ಎನಿಸಿದೆ. ಪ್ರ + ಇಯ = ಪ್ರಿಯ. ಪ್ರ = ಪರರಿಂದ, ಇಯ = ಪ್ರಾಪ್ಯ, ಹೀಗೆ ಭಕ್ತರಿಂದ ಪ್ರಾಪ್ಯನಾದುದರಿಂದ ನಾರಾಯಣನ ಶಿರೋಭಾಗ ಪ್ರಿಯ ಎನಿಸಿದೆ. 'ಪ್ರಿಯ' ಎಂದರೆ ಪರೋಪಕಾರದಿಂದ ಉಂಟಾಗುವ ಸುಖ. ಆ ಸುಖದಲ್ಲಿ ನಿಯಾಮಕವಾಗಿ ಆನಂದಮಯನ ಶಿರಸ್ಸು ಇದೆ. ಮತ್ತೊಬ್ಬರಿಗೆ ಸುಖ-

ಪ್ರದನಾದುದರಿಂದ (ಮೋದನಾತ್) ಮೋದ ಎಂದು ಅವನ ಬಲಭುಜಕ್ಕೆ ಹೆಸರು. ರೂಪ-ರಸಾದಿ ವಿಷಯಗಳ ಅನುಭವದಿಂದಾಗುವ ಸುಖ ಮೋದ. ಅದಕ್ಕೆ ನಿಯಾಮಕನಾಗಿ ಆನಂದಮಯನು ಆ ಸುಖದಲ್ಲಿ ಇದ್ದಾನೆ. ತನ್ನ ಅಪರೋಕ್ಷ ಕೊಟ್ಟು ಅತಿ ಹೆಚ್ಚಿನ ಆನಂದ ನೀಡುವುದರಿಂದ ಅವನ ಎಡಬಾಹುವಿಗೆ ಪ್ರಮೋದ ಎಂದು ಹೆಸರು. ಸಾತ್ವಿಕವಾದ ವಿಷಯಗಳ ಅನುಭವದಿಂದ ಉಂಟಾಗುವ ಸುಖ ಪ್ರಮೋದ. ಅದರಲ್ಲಿದ್ದಾನೆ, ಆನಂದಮಯ. ಆತ್ಮಾ ಎಂದರೆ ಮಧ್ಯದೇಹವು. ಆನಂದಮಯನ ಮಧ್ಯದೇಹ ಆನಂದನಾಮಕ. 'ಆ ಸಮಂತಾತ್ ನಂದಯತಿ = ಆನಂದಃ.' ಸಜ್ಜನರ ಹೃದಯದಲ್ಲಿದ್ದು ಅವರಿಗೆ ಆನಂದ ನೀಡುವುದರಿಂದ ಆನಂದಮಯನ ಮಧ್ಯದೇಹಕ್ಕೆ ಆನಂದ ಎಂದು ಹೆಸರು. ಆ ಮಧ್ಯದೇಹ ಜೀವರ ಸ್ವರೂಪಾನಂದದಲ್ಲಿ ಇದೆ. ಬಾಲದಂತೆ ದೇಹದ ಕೊನೆಯಲ್ಲಿರುವುದರಿಂದ ಪುಚ್ಛ ಎನಿಸುವ ಅವನ ಕಾಲುಗಳೆರಡು 'ಬ್ರಹ್ಮ' ಎನಿಸಿವೆ. ಸೃಷ್ಟಿ ಮಾಡಿ ಜಗತ್ತನ್ನು ವಿಸ್ತರಿಸುವುದರಿಂದ ಅದಕ್ಕೆ ಬ್ರಹ್ಮ ಎಂದು ಹೆಸರು. ಅದು ಬ್ರಹ್ಮ ಎನಿಸುವ ಮುಖ್ಯಪ್ರಾಣನಲ್ಲಿ ಇದೆ.

ಒಟ್ಟಿನಲ್ಲಿ, ನಮ್ಮ ದೇಹದಲ್ಲಿರುವ ಆನಂದಮಯಕೋಶ, ಪ್ರಿಯ-ಮೋದ ಮುಂತಾದ ಸುಖದ ಪ್ರಭೇದಗಳು, ವಾಯುದೇವ ಇವೆಲ್ಲವೂ ಆನಂದಮಯ ನಾರಾಯಣನ ಅಧೀನವಾಗಿವೆ, ಎಂದು ತಾತ್ಪರ್ಯ.

ಆಚಾರ್ಯರು ಬ್ರಹ್ಮಸೂತ್ರಭಾಷ್ಯದಲ್ಲಿ ಆನಂದಮಯನೆಂಬ ನಾರಾಯಣನು ಮತ್ತೆ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ. ಅನಿರುದ್ಧ ಎಂಬ ಹೆರಿನಿಂದ ತನ್ನದೇ ತಲೆ ಮುಂತಾದ ಐದು ಅವಯವಗಳಾಗಿರುತ್ತಾನೆ, ಎಂದು ತಿಳಿಸಿದ್ದಾರೆ.

ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ ।
ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ ॥

ಎಂದು ಮುಂತಾಗಿ ಬೃಹತ್ಸಂಹಿತೆಯನ್ನು ಉದಾಹರಿಸಿ ಆಚಾರ್ಯರು ಬ್ರಹ್ಮಸೂತ್ರ ಭಾಷ್ಯದ ಆನಂದಮಯಾಧಿಕರಣದಲ್ಲಿ ಈ ವಿಷಯವನ್ನು ಹೇಳಿದ್ದಾರೆ.

**ನನು ಲಕ್ಷಣವಾಕ್ಯೋಕ್ತ ಸತ್ಯತ್ವಾದಿ ಲಕ್ಷಣಾನಾಂ ಅನೇಕರೂಪಸ್ಥತಯಾ ಏಕತ್ರೈವಾಭಾವಾತ್ ಕಥಂ ತೇಷಾಂ ಲಕ್ಷಣತ್ವಮ್ ? ಇತಿ ಚೇತ್, ರೂಪಾಣಾಂ ಅಭೇದಾತ್, ಸರ್ವರೂಪಾಣಾಂ ಪ್ರತ್ಯೇಕಂ ಸತ್ಯತ್ವಾದಿ**

**ಲಕ್ಷಣವತ್ವೇಽಪಿ ಭೇದಪ್ರತಿನಿಧಿ ವಿಶೇಷಬಲೇನ ಅದನಪ್ರಾಣನಾದಿ ತತ್ತದ್‌ಗುಣದಾತೃತ್ವಸ್ಯ ವ್ಯವಸ್ಥಯಾ ಪ್ರಕಾಶನಾತ್ ನಾಮಭೇದಃ ಪಂಚರೂಪತ್ವ ಸಂಖ್ಯಾದಿಕಂ ಚ ಯುಕ್ತಂ ಇತಿ ಜ್ಞೇಯಮ್ ॥ ೧೧ ॥**

'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬ ಲಕ್ಷಣ ವಾಕ್ಯದಲ್ಲಿ ಹೇಳಿರುವ ಸತ್ಯತ್ವ ಲಕ್ಷಣವು ಅನ್ನಮಯನಲ್ಲಿ, ಜ್ಞಾನತ್ವವು ವಿಜ್ಞಾನಮಯನಲ್ಲಿ, ಅನಂತತ್ವವು ಆನಂದಮಯನಲ್ಲಿ ಹೀಗೆ ಒಬ್ಬೊಬ್ಬರಲ್ಲಿ ಒಂದೊಂದು ಲಕ್ಷಣವು ಬಂತು, ಒಬ್ಬನೇ ಬ್ರಹ್ಮನಲ್ಲಿ ಬರಲಿಲ್ಲವಲ್ಲ?

ಈ ಆಕ್ಷೇಪ ಸರಿಯಲ್ಲ. ಈ ಐದೂ ರೂಪಗಳೂ ಅಭಿನ್ನವಾಗಿವೆ. ಎಲ್ಲವೂ ಒಂದೇ. ಆದ್ದರಿಂದ ಒಬ್ಬನಲ್ಲೇ ಎಲ್ಲ ಲಕ್ಷಣಗಳೂ ಇವೆ. ಆದರೂ ಭೇದ ಪ್ರತಿನಿಧಿಯಾದ ವಿಶೇಷವಿರುವುದರಿಂದ ಒಂದು ರೂಪವು ಸಂಹಾರಕವಾಗಿಯೂ ಇನ್ನೊಂದು ರೂಪವು ಜಗಚ್ಚೇಷ್ಟಕವಾಗಿಯೂ ಕಾಣಿಸಿಕೊಳ್ಳುತ್ತದೆ. ಇದರಿಂದಾಗಿಯೇ ಅವುಗಳಿಗೆ ಹೆಸರು ಬೇರೆ ಬೇರೆಯಾಗಿದೆ. 'ಐದು' ಎಂಬ ಸಂಖ್ಯೆಯೂ ವಿಶೇಷದಿಂದಾಗಿಯೇ ಅವುಗಳಲ್ಲಿದೆ. ಆದ್ದರಿಂದ ಎಲ್ಲ ರೂಪಗಳೂ ಒಂದೇ ಆಗಿವೆ, ಗುಣ-ಕ್ರಿಯಾ-ಸಂಖ್ಯಾಭೇದದಿಂದ ಅವುಗಳಲ್ಲಿ ಭೇದವನ್ನು ತಿಳಿಯಬಾರದು. ॥ ೧೧ ॥

**'ಸ ವಾ ಏಷ ಪುರುಷ' ಇತ್ಯುಪಕ್ರಮ್ಯ ರೂಪಪಂಚಕ ನಿರೂಪಣೇನ ಸತ್ಯತ್ವಾದಿ ಲಕ್ಷಣಾನಿ ವಿವೃತ್ಯ ಇದಾನೀಂ ಪಂಚರೂಪಮಪಿ ಬ್ರಹ್ಮ ನ ಜೀವಾದ್ ಭಿನ್ನಂ ಇತಿ ಜಾನತಾಂ, ಭಿನ್ನಮಿತಿ ಜಾನತಾಂ ಚ ಉಭಯೇಷಾಂ ಫಲಭೇದೋಕ್ತ್ಯಾ ಜೀವಾನ್ಯಬ್ರಹ್ಮತ್ವಂ ಪಂಚಾನಾಂ ಶ್ಲೋಕೇನ ಸ್ಥಾಪಯತಿ - ತದಪ್ಯೇಷ ಇತಿ ॥**

ಈವರೆಗೆ 'ಸ ವಾ ಏಷ ಪುರುಷಃ ಅನ್ನರಸಮಯಃ'' ಎಂಬ ಅನ್ನಮಯಪ್ರಕರಣದಿಂದ ಪ್ರಾರಂಭಿಸಿ ಆನಂದಮಯ ಪ್ರಕರಣದವರೆಗೆ ಅನ್ನಮಯಾದಿ ಐದು ರೂಪಗಳನ್ನು ವಿವರಿಸಲಾಯಿತು. ಈ ರೂಪಗಳು ಜೀವಾತ್ಮರಿಗಿಂತ ಭಿನ್ನವಾಗಿವೆ, ಎಂದು ಕೆಲವರು ಹೇಳಿದರೆ ಮತ್ತೆ ಕೆಲವರು ಜೀವನಿಗಿಂತ ಅಭಿನ್ನ ಎಂದು ತಿಳಿಯುತ್ತಾರೆ. ಇವರಿಬ್ಬರಿಗೂ ಸಿಗುವ ಫಲದಲ್ಲಿ ವ್ಯತ್ಯಾಸವನ್ನು ಹೇಳುವ ಮೂಲಕ ಈ ರೂಪಗಳು ಜೀವಾತ್ಮರಿಗಿಂತ ಭಿನ್ನವಾಗಿವೆ ಎಂದು ಮುಂದಿನ ಶ್ಲೋಕದಲ್ಲಿ ಸಿದ್ಧಾಂತಿಸಲಾಗಿದೆ.

**ತದಪ್ಯೇಷಃ ಶ್ಲೋಕೋ ಭವತಿ ।**

**ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ಚೇದ್ ವೇದ । ಸಂತಮೇನಂ ತತೋ ವಿದುರಿತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ ॥ ೧೨ ॥**

ಇದುವರೆಗೆ ಹೇಳಿರುವ ಪಂಚರೂಪಗಳು ಜೀವನಿಗಿಂತ ಭಿನ್ನವಾಗಿವೆ ಎನ್ನಲು ಈ ಶ್ಲೋಕವಿದೆ - ಬ್ರಹ್ಮನು ಜೀವನಿಗಿಂತ ಭಿನ್ನನಾಗಿಲ್ಲ ಎಂದು ತಿಳಿದರೆ ಅಂತಹವನು ದುಃಖವನ್ನು ಹೊಂದುತ್ತಾನೆ. ಬ್ರಹ್ಮನು ಜೀವನಿಗಿಂತ ಭಿನ್ನನಾಗಿದ್ದಾನೆ ಎಂದು ತಿಳಿದವನು ಮುಕ್ತಿಯೋಗ್ಯನಾಗಿರುತ್ತಾನೆ.

ಹಿಂದೆ ಹೇಳಿರುವ ವಿಜ್ಞಾನಮಯ ವಾಸುದೇವನಿಗೆ ಈ ಆನಂದಮಯ ನಾರಾಯಣನು ದೇಹದೊಳಗಿನ ಆತ್ಮನಂತೆ ಇದ್ದಾನೆ. ವಿಜ್ಞಾನಮಯನು ಹಿಂದಿನ ಮನೋಮಯನಿಗೆ ಆತ್ಮನಾಗಿರುವಂತೆ.

**ಪಂಚರೂಪಂ ಬ್ರಹ್ಮ ಜೀವಾನ್ಯತ್ ಇತ್ಯತ್ರಾರ್ಥೇಽಪಿ ಶ್ಲೋಕೋಽಸ್ತಿ ಇತ್ಯರ್ಥಃ । ಬ್ರಹ್ಮ ಜೀವವ್ಯತಿರೇಕೇಣ ಅಸತ್ = ನಾಸ್ತೀತಿ ವೇದ ಚೇತ್, ಸಃ ಅಸನ್ನೇವ = ದುಃಖೀ ಏವ ಭವತಿ ಇತ್ಯರ್ಥಃ । ಜೀವಾತ್ ಅನ್ಯತ್ ಬ್ರಹ್ಮ ಅಸ್ತೀತಿ ವೇದ ಚೇತ್, ಏನಂ ಸಂತಂ = ಸುಖಿನಂ, ಮುಕ್ತಿಯೋಗ್ಯಂ ವಿದುಃ । 'ಇತ್ಯೇಷ ಶ್ಲೋಕಃ'' ಇತಿ ಇತಿ ಶಬ್ದಸ್ಯಾನ್ವಯಃ ।**

**ಸೂತ್ರಭಾಷ್ಯಾದೌ ತು ಆನಂದಮಯ ಮಾತ್ರಪರಃ ಶ್ಲೋಕಃ ವ್ಯಾಖ್ಯಾತಃ । ತಸ್ಯೈಷ ಏವ ಇತ್ಯಾದಿ ಪ್ರಾಗ್ವತ್ ॥ ೧೨ ॥**

ಇದುವರೆಗೆ ನಿರೂಪಿಸಿರುವ ಅನ್ನಮಯಾದಿ ಪಂಚರೂಪನಾದ ಬ್ರಹ್ಮನು ಜೀವಾತ್ಮನಿಗಿಂತ ಭಿನ್ನನು, ಎನ್ನುವ ವಿಷಯದಲ್ಲಿ ಈ ಮಂತ್ರವಿದೆ ಎಂದು - ತದಪ್ಯೇಷಃ ಶ್ಲೋಕೋ ಭವತಿ - ಎಂಬ ವಾಕ್ಯಕ್ಕೆ ಅರ್ಥ.

ಬ್ರಹ್ಮನು ಜೀವನಿಗಿಂತ ಭಿನ್ನನಾಗಿ ಅಸತ್ = ಇಲ್ಲ ಎಂದು ತಿಳಿದರೆ ಅಂತಹವನು ಅಸನ್ನೇವ = ದುಃಖಿಯಾಗಿಯೇ ಇರುತ್ತಾನೆ. ಜೀವನಿಗಿಂತ ಭಿನ್ನನಾದ ಬ್ರಹ್ಮನು ಇದ್ದಾನೆ ಎಂದು ತಿಳಿದರೆ ಅಂತಹವನನ್ನು ಸಂತಂ = ಸುಖವುಳ್ಳವನನ್ನಾಗಿ ಅಂದರೆ ಮುಕ್ತಿಯೋಗ್ಯನನ್ನಾಗಿ ತಿಳಿಯುತ್ತಾರೆ, ಎಂದು ಅರ್ಥ.

'ಇತ್ಯೇಷಃ ಶ್ಲೋಕಃ' ಎಂದು ಕೊನೆಯಲ್ಲಿರುವ ಇತಿ ಶಬ್ದಕ್ಕೆ ಅನ್ವಯ.

ಬ್ರಹ್ಮಸೂತ್ರ ಭಾಷ್ಯದಲ್ಲಿ ಈ ಶ್ಲೋಕವನ್ನು ಆನಂದಮಯನಿಗೆ ಮಾತ್ರ ಸಂಬಂಧಪಡುವಂತೆ ವ್ಯಾಖ್ಯಾನ ಮಾಡಲಾಗಿದೆ. ಆದರೆ ತೈತ್ತಿರೀಯ ಭಾಷ್ಯದಲ್ಲಿ ಈ ಶ್ಲೋಕವನ್ನು ಪಂಚರೂಪಗಳಿಗೂ ಸಂಬಂಧ ಪಡುವಂತೆ ಆಚಾರ್ಯರು ವಿವರಿಸಿದ್ದಾರೆ -

ಪಂಚರೂಪಂ ಚ ತದ್ ಬ್ರಹ್ಮ ಜೀವಾದನ್ಯನ್ನ ವಿದ್ಯತೇ ।
ಇತಿ ಯೇ ತು ವಿಜಾನಂತಿ ತೇಽಸಂತಸ್ತಮ ಆಲಯಾಃ ॥
ಜೀವಾದನ್ಯತ್ ಪರಂ ಬ್ರಹ್ಮ ಪಂಚರೂಪಂ ಚ ಯೇ ವಿದುಃ ।
ಸಂತಸ್ತೇ ಇತಿ ವಿಜ್ಞೇಯಾ ಮೋಕ್ಷಯೋಗ್ಯಾ ಹಿ ತೇ ಧ್ರುವಮ್ ॥

'ತಸ್ಯೈಷ ಏವ ಶಾರೀರ ಆತ್ಮಾ' ಎಂಬ ಎರಡು ವಾಕ್ಯಗಳಿಗೆ ಹಿಂದಿನ ಪ್ರಕರಣದಂತೆಯೆ, ಅರ್ಥವನ್ನು ತಿಳಿಯಬೇಕು. ॥ ೧೨ ॥

**''ಬ್ರಹ್ಮವಿದಾಪ್ನೋತಿ ಪರಂ'' ಇತ್ಯುಕ್ತ್ವಾ ಉತ್ಪನ್ನಶಂಕಾತ್ರಯಂ ಮಂತ್ರೋದಾಹರಣಪೂರ್ವಕ - ಮಂತ್ರೋಕ್ತ ಲಕ್ಷಣ ಪ್ರಪಂಚನೇನ ನಿರಸ್ಯ ಜೀವಾನ್ಯತ್ವೇನ ತದನನ್ಯತ್ವೇನ ಚ ಜ್ಞಾನಿನೋ ಮುಕ್ತಿಮೋ ರೂಪ ಫಲೋಕ್ತ್ವಾ ಅವಸರ ಪ್ರಾಪ್ತಂ ಪ್ರಷ್ಟವ್ಯಮರ್ಥಂ ಪೃಷ್ಟವಾನ್ ವರುಣೋ ಬ್ರಹ್ಮಾಣಂ ಇತ್ಯಾಹ 'ಅಥಾತೋಽನು ಪ್ರಶ್ನಾಃ' ಇತಿ ॥**

ಈ ವಲ್ಲಿಯ ಪ್ರಾರಂಭದಲ್ಲಿ ''ಬ್ರಹ್ಮಜ್ಞಾನಿಯು ಬ್ರಹ್ಮನನ್ನು ಹೊಂದುತ್ತಾನೆ'' ಎಂದಾಗ ಮೂರು ಪ್ರಶ್ನೆಗಳು ಬಂತು. ಆ ಮೂರು ಪ್ರಶ್ನೆಗಳನ್ನು ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ, ಯೋ ವೇದ ನಿಹಿತಂ ಗುಹಾಯಾಂ.... ।'' ಇತ್ಯಾದಿ ಮಂತ್ರದ ಆಧಾರವನ್ನು ಕೊಟ್ಟು ಪರಿಹರಿಸಲಾಯಿತು. ಮುಂದಿನ ಅನ್ನಮಯಾದಿ ಪ್ರಕರಣಗಳಲ್ಲಿ ಆರಂಭದ ಮಂತ್ರದಲ್ಲಿ ಹೇಳಿದ ಲಕ್ಷಣಗಳನ್ನು ವಿವರಿಸಲಾಯಿತು.

ಕೊನೆಯ ಆನಂದಮಯ ಪ್ರಕರಣದಲ್ಲಿ ಜೀವ ಬ್ರಹ್ಮಾಭೇದವನ್ನು ತಿಳಿದವರಿಗೆ ಅನರ್ಥವನ್ನೂ ಭೇದಜ್ಞಾನಿಗಳಿಗೆ ಸುಖವನ್ನೂ ಹೇಳಲಾಯಿತು. ಹೀಗೆ ಹೇಳಬೇಕಾದ ವಿಷಯಗಳನ್ನು ತಂದೆ ಬ್ರಹ್ಮದೇವರು ಹೇಳಿ ಮುಗಿಸಿದ ಮೇಲೆ ಮಗನಾದ ವರುಣನು ಕೇಳಬೇಕಾದ ಜಿಜ್ಞಾಸೆಯನ್ನು ತಂದೆಯ ಮುಂದಿಟ್ಟ ಎನ್ನುತ್ತದೆ ಮುಂದಿನ ಉಪನಿಷತ್ತು.

**ಅಥಾತೋಽನು ಪ್ರಶ್ನಾಃ । ಉತಾವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚನ ಗಚ್ಛತೀ ೩ । ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚಿತ್ ಸಮಶ್ನುತಾ ೩ ಉ ॥ ೧೩ ॥**

ಬ್ರಹ್ಮದೇವನ ಉಪದೇಶದಿಂದ ಉಂಟಾದ ಸಾಂದರ್ಭಿಕ ಪ್ರಶ್ನೆಗಳನ್ನು ವರುಣದೇವನು ಕೇಳುತ್ತಿದ್ದಾನೆ. 'ದೇಹಾಂತವಾದಮೇಲೆ ಅಜ್ಞಾನಿಯೂ ಮುಕ್ತಲೋಕಕ್ಕೆ ಹೋಗುವನೋ, ಜ್ಞಾನಿಮಾತ್ರವೋ? ಜ್ಞಾನಿ-ಹೋಗುತ್ತಾನೆಂದಾದರೂ ಒಬ್ಬನೇ ಹೋಗುವನೋ ಅಥವಾ ಜ್ಞಾನಿಗಳೆಲ್ಲರೂ ಹೋಗುವರೋ? ಹೋದವರಲ್ಲೂ ಯಾರೋ ಒಬ್ಬ ಬ್ರಹ್ಮತ್ವವನ್ನು ಸರಿಯಾಗಿ ಅನುಭವಿಸುವನೋ ಅಥವಾ, ಎಲ್ಲರೂ ಅನುಭವಿಸುವರೋ ?'

ವರುಣದೇವನ ಪ್ರಶ್ನೆಗೆ ಬ್ರಹ್ಮನ ಉತ್ತರ, ಸಮ್ಮತಿ ಸೂಚಕವಾದ "ಉ" ಎಂದು. 'ನೀನು ಕೊನೆಯಲ್ಲಿ ಹೇಳಿದಂತೆ ಒಬ್ಬನು ಮಾತ್ರ ಬ್ರಹ್ಮನನ್ನು ಚೆನ್ನಾಗಿ ಅನುಭವಿಸುವನು ಎನ್ನುವುದು ನನಗೆ ಸಮ್ಮತವಾಗಿದೆ' ಎಂದು.

**ವಿವರಣೆ** — 'ಕಶ್ಚಿತ್ ಸಮಶ್ನುತೇ?' ಎಂದು ವರುಣನ ಪ್ರಶ್ನೆಗೆ "ಹೌದು, ಒಬ್ಬನೇ ಒಬ್ಬ ಸರಿಯಾಗಿ ಬ್ರಹ್ಮನನ್ನು ಅನುಭವಿಸುತ್ತಾನೆ' ಎಂದು ಸಮ್ಮತಿಯನ್ನು ಬ್ರಹ್ಮದೇವರು ನೀಡಿದರು. ಇದರಿಂದ ಮೂರೂ ಪ್ರಶ್ನೆಗಳಿಗೆ ಉತ್ತರ ಬಂದಂತಾಯಿತು. ಅನೇಕರಲ್ಲಿ ಒಬ್ಬನು ಚೆನ್ನಾಗಿ ಅನುಭವಿಸುತ್ತಾನೆ, ಎಂದುದರಿಂದ ಉಳಿದವರೂ ತಮ್ಮ ತಮ್ಮ ಯೋಗ್ಯತೆಯಂತೆ ಅನುಭವಿಸುತ್ತಾರೆ ಎಂದಂತಾಯಿತು. ಆದರಂತೆ, ಅಜ್ಞಾನಿಗಳಿಗೆ ಆ ಅನುಭವವಿಲ್ಲ, ಜ್ಞಾನಿಗಳಿಗೆ ಮಾತ್ರ ಎಂದೂ ತಿಳಿಸಿದಂತಾಯಿತು.

ಬ್ರಹ್ಮನು ಜೀವನಿಗಿಂತ ಭಿನ್ನನಾಗಿ ಅಸತ್ = ಇಲ್ಲ ಎಂದು ತಿಳಿದರೆ ಅಂತಹವನು ಅಸನ್ನೇವ = ದುಃಖಿಯಾಗಿಯೇ ಇರುತ್ತಾನೆ. ಜೀವನಿಗಿಂತ ಭಿನ್ನನಾದ ಬ್ರಹ್ಮನು ಇದ್ದಾನೆ ಎಂದು ತಿಳಿದರೆ ಅಂತಹವನನ್ನು ಸಂತಂ = ಸುಖವುಳ್ಳವನನ್ನಾಗಿ ಅಂದರೆ ಮುಕ್ತಿಯೋಗ್ಯನನ್ನಾಗಿ ತಿಳಿಯುತ್ತಾರೆ, ಎಂದು ಅರ್ಥ.

'ಇತ್ಯೇಷಃ ಶ್ಲೋಕಃ' ಎಂದು ಕೊನೆಯಲ್ಲಿರುವ ಇತಿ ಶಬ್ದಕ್ಕೆ ಅನ್ವಯ.

ಬ್ರಹ್ಮಸೂತ್ರ ಭಾಷ್ಯದಲ್ಲಿ ಈ ಶ್ಲೋಕವನ್ನು ಆನಂದಮಯನಿಗೆ ಮಾತ್ರ ಸಂಬಂಧಪಡುವಂತೆ ವ್ಯಾಖ್ಯಾನ ಮಾಡಲಾಗಿದೆ. ಆದರೆ ತೈತ್ತಿರೀಯ ಭಾಷ್ಯದಲ್ಲಿ ಈ ಶ್ಲೋಕವನ್ನು ಪಂಚರೂಪಗಳಿಗೂ ಸಂಬಂಧ ಪಡುವಂತೆ ಆಚಾರ್ಯರು ವಿವರಿಸಿದ್ದಾರೆ -

ಪಂಚರೂಪಂ ಚ ತದ್ ಬ್ರಹ್ಮ ಜೀವಾದನ್ಯನ್ನ ವಿದ್ಯತೇ ।
ಇತಿ ಯೇ ತು ವಿಜಾನಂತಿ ತೇಽಸಂತಸ್ತಮ ಆಲಯಾಃ ॥
ಜೀವಾದನ್ಯತ್ ಪರಂ ಬ್ರಹ್ಮ ಪಂಚರೂಪಂ ಚ ಯೇ ವಿದುಃ ।
ಸಂತಸ್ತೇ ಇತಿ ವಿಜ್ಞೇಯಾ ಮೋಕ್ಷಯೋಗ್ಯಾ ಹಿ ತೇ ಧ್ರುವಮ್ ॥

'ತಸ್ಯೈಷ ಏವ ಶಾರೀರ ಆತ್ಮಾ' ಎಂಬ ಎರಡು ವಾಕ್ಯಗಳಿಗೆ ಹಿಂದಿನ ಪ್ರಕರಣದಂತೆಯೆ, ಅರ್ಥವನ್ನು ತಿಳಿಯಬೇಕು. ॥ ೧೨ ॥

**''ಬ್ರಹ್ಮವಿದಾಪ್ನೋತಿ ಪರಂ'' ಇತ್ಯುಕ್ತ್ವಾ ಉತ್ಪನ್ನಶಂಕಾತ್ರಯಂ ಮಂತ್ರೋ-ದಾಹರಣಪೂರ್ವಕ - ಮಂತ್ರೋಕ್ತ ಲಕ್ಷಣ ಪ್ರಪಂಚನೇನ ನಿರಸ್ಯ ಜೀವಾನ್ಯತ್ವೇನ ತದನನ್ಯತ್ವೇನ ಚ ಜ್ಞಾನಿನೋ ಮುಕ್ತಿತಮೋ ರೂಪ ಫಲೋಕ್ತ್ವಾ ಅವಸರ ಪ್ರಾಪ್ತಂ ಪ್ರಷ್ಟವ್ಯಮರ್ಥಂ ಪೃಷ್ಟವಾನ್ ವರುಣೋ ಬ್ರಹ್ಮಾಣಂ ಇತ್ಯಾಹ 'ಅಥಾತೋಽನು ಪ್ರಶ್ನಾಃ' ಇತಿ ॥**

ಈ ವಲ್ಲಿಯ ಪ್ರಾರಂಭದಲ್ಲಿ ''ಬ್ರಹ್ಮಜ್ಞಾನಿಯು ಬ್ರಹ್ಮನನ್ನು ಹೊಂದುತ್ತಾನೆ'' ಎಂದಾಗ ಮೂರು ಪ್ರಶ್ನೆಗಳು ಬಂತು. ಆ ಮೂರು ಪ್ರಶ್ನೆಗಳನ್ನು ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ, ಯೋ ವೇದ ನಿಹಿತಂ ಗುಹಾಯಾಂ.... ।'' ಇತ್ಯಾದಿ ಮಂತ್ರದ ಆಧಾರವನ್ನು ಕೊಟ್ಟು ಪರಿಹರಿಸಲಾಯಿತು. ಮುಂದಿನ ಅನ್ನಮಯಾದಿ ಪ್ರಕರಣಗಳಲ್ಲಿ ಆರಂಭದ ಮಂತ್ರದಲ್ಲಿ ಹೇಳಿದ ಲಕ್ಷಣಗಳನ್ನು ವಿವರಿಸಲಾಯಿತು.

ಕೊನೆಯ ಆನಂದಮಯ ಪ್ರಕರಣದಲ್ಲಿ ಜೀವ ಬ್ರಹ್ಮಾಭೇದವನ್ನು ತಿಳಿದವರಿಗೆ ಅನರ್ಥವನ್ನೂ ಭೇದಜ್ಞಾನಿಗಳಿಗೆ ಸುಖವನ್ನೂ ಹೇಳಲಾಯಿತು. ಹೀಗೆ ಹೇಳಬೇಕಾದ ವಿಷಯಗಳನ್ನು ತಂದೆ ಬ್ರಹ್ಮದೇವರು ಹೇಳಿ ಮುಗಿಸಿದ ಮೇಲೆ ಮಗನಾದ ವರುಣನು ಕೇಳಬೇಕಾದ ಜಿಜ್ಞಾಸೆಯನ್ನು ತಂದೆಯ ಮುಂದಿಟ್ಟ ಎನ್ನುತ್ತದೆ ಮುಂದಿನ ಉಪನಿಷತ್ತು.

**ಅಥಾತೋಽನು ಪ್ರಶ್ನಾಃ । ಉತಾವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚನ ಗಚ್ಛತೀ ೩ । ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ । ಕಶ್ಚಿತ್ ಸಮಶ್ನುತಾ ೩ ಉ ॥ ೧೩ ॥**

ಬ್ರಹ್ಮದೇವನ ಉಪದೇಶದಿಂದ ಉಂಟಾದ ಸಾಂದರ್ಭಿಕ ಪ್ರಶ್ನೆಗಳನ್ನು ವರುಣದೇವನು ಕೇಳುತ್ತಿದ್ದಾನೆ. 'ದೇಹಾಂತವಾದಮೇಲೆ ಅಜ್ಞಾನಿಯೂ ಮುಕ್ತಲೋಕಕ್ಕೆ ಹೋಗುವನೋ, ಜ್ಞಾನಿಮಾತ್ರವೋ? ಜ್ಞಾನಿ-ಹೋಗುತ್ತಾನೆಂದಾದರೂ ಒಬ್ಬನೇ ಹೋಗುವನೋ ಅಥವಾ ಜ್ಞಾನಿಗಳೆಲ್ಲರೂ ಹೋಗುವರೋ? ಹೋದವರಲ್ಲೂ ಯಾರೋ ಒಬ್ಬ ಬ್ರಹ್ಮತ್ವವನ್ನು ಸರಿಯಾಗಿ ಅನುಭವಿಸುವನೋ ಅಥವಾ, ಎಲ್ಲರೂ ಅನುಭವಿಸುವರೋ ?'

ವರುಣದೇವನ ಪ್ರಶ್ನೆಗೆ ಬ್ರಹ್ಮನ ಉತ್ತರ, ಸಮ್ಮತಿ ಸೂಚಕವಾದ ''ಉ'' ಎಂದು. 'ನೀನು ಕೊನೆಯಲ್ಲಿ ಹೇಳಿದಂತೆ ಒಬ್ಬನು ಮಾತ್ರ ಬ್ರಹ್ಮನನ್ನು ಚೆನ್ನಾಗಿ ಅನುಭವಿಸುವನು ಎನ್ನುವುದು ನನಗೆ ಸಮ್ಮತವಾಗಿದೆ' ಎಂದು.

**ವಿವರಣೆ** — 'ಕಶ್ಚಿತ್ ಸಮಶ್ನುತೇ?' ಎಂದು ವರುಣನ ಪ್ರಶ್ನೆಗೆ ''ಹೌದು, ಒಬ್ಬನೇ ಒಬ್ಬ ಸರಿಯಾಗಿ ಬ್ರಹ್ಮನನ್ನು ಅನುಭವಿಸುತ್ತಾನೆ' ಎಂದು ಸಮ್ಮತಿಯನ್ನು ಬ್ರಹ್ಮದೇವರು ನೀಡಿದರು. ಇದರಿಂದ ಮೂರೂ ಪ್ರಶ್ನೆಗಳಿಗೆ ಉತ್ತರ ಬಂದಂತಾಯಿತು. ಅನೇಕರಲ್ಲಿ ಒಬ್ಬನು ಚೆನ್ನಾಗಿ ಅನುಭವಿಸುತ್ತಾನೆ, ಎಂದುದರಿಂದ ಉಳಿದವರೂ ತಮ್ಮ ತಮ್ಮ ಯೋಗ್ಯತೆಯಂತೆ ಅನುಭವಿಸುತ್ತಾರೆ ಎಂದಂತಾಯಿತು. ಅದರಂತೆ, ಅಜ್ಞಾನಿಗಳಿಗೆ ಆ ಅನುಭವವಿಲ್ಲ, ಜ್ಞಾನಿಗಳಿಗೆ ಮಾತ್ರ ಎಂದೂ ತಿಳಿಸಿದಂತಾಯಿತು.

ಅಥ = ಸಂದರ್ಭವಶಾತ್ ಬಂದಿರುವ, ಅತಃ = ಪ್ರಶ್ನೆಗೆ ಕಾರಣವೂ ಇರುವುದರಿಂದ ಅನು = ಗುರುವಾದ ಬ್ರಹ್ಮದೇವರ ಉಪದೇಶಕ್ಕೆ ಅನುಸಾರಿಯಾಗಿ ಪ್ರಶ್ನೆಗಳನ್ನು ವರುಣದೇವನು ಮಾಡಿದನು ಎಂದರ್ಥ. ಆ ಪ್ರಶ್ನೆಗಳನ್ನು ''ಉತಾವಿದ್ವಾನ್'' ಎಂದು ಉಪನಿಷತ್ತು ತಿಳಿಸಿದೆ.

**ಉತ-ಅವಿದ್ವಾನ್ = ಅವಿದ್ವಾನಪಿ ಯಃ ಕಶ್ಚನ ಪ್ರೇತ್ಯ ಅಮುಂ ಲೋಕಂ ಗಚ್ಛತಿ, ಆಹೋ ವಿದ್ವಾನ್ ಪ್ರೇತ್ಯ ಅಮುಂ ಲೋಕಂ ಗಚ್ಛತಿ ? ಇತ್ಯನುಕರ್ಷಃ । ಅಯಮೇಕಃ ಪ್ರಶ್ನಃ । ವಿದ್ವಾನಿತ್ಯತ್ರಾಪಿ ಕಿಂ ಸರ್ವೋಽಪಿ ಗಚ್ಛತಿ, ಕಶ್ಚಿದೇವ? ಇತಿ ದ್ವಿತೀಯಃ ಪ್ರಶ್ನಃ । ಸರ್ವೋಽಪಿ ಇತ್ಯತ್ರಾಪಿ, ಕಿಂ ಸರ್ವೋಽಪಿ ಸಮ್ಯಕ್ ಅಶ್ನುತೇ = ಪ್ರಾಪ್ನೋತಿ, ಬ್ರಹ್ಮೇತಿ ಶೇಷಃ, ಉತ ಕಶ್ಚಿದೇವ ಸಮಶ್ನುತೇ ನ ಸರ್ವೋಽಪಿ? ಇತಿ ತೃತೀಯಃ ಪ್ರಶ್ನಃ । ಇತಿ ಪ್ರಶ್ನತ್ರಯಂ ಧ್ಯೇಯಮ್ । ಪ್ರಶ್ನಾಃ ಇತಿ ಬಹುವಚನಾನು ರೋಧಾತ್ ।**

ಅಜ್ಞಾನಿಯೂ ಕೂಡ ಯಾರಾದರೊಬ್ಬ, ಮರಣ ಹೊಂದಿ ಈ ವೈಕುಂಠಾದಿ ಮುಕ್ತಲೋಕಕ್ಕೆ ಹೋಗುತ್ತಾನೆಯೋ, ಅಥವಾ ಜ್ಞಾನಿ ಮಾತ್ರ ಮರಣಾನಂತರ ವೈಕುಂಠಾದಿ ಲೋಕಕ್ಕೆ ಹೋಗುತ್ತಾನೋ? 'ವಿದ್ವಾನಮುಂ ಲೋಕಂ ಪ್ರೇತ್ಯ' ಎಂಬ ವಾಕ್ಯದಲ್ಲೂ 'ಗಚ್ಛತಿ' ಎಂಬ ಕ್ರಿಯಾಪದವನ್ನು ಸೇರಿಸಿಕೊಳ್ಳಬೇಕು. ಹೀಗೆ ಇದೊಂದು ಪ್ರಶ್ನೆ.

'ವಿದ್ವಾನ್ ಅಮುಂ ಲೋಕಂ' ಎಂಬಲ್ಲೂ ಜ್ಞಾನಿಗಳಲ್ಲಿ ಯಾರಾದರೊಬ್ಬನು ಮಾತ್ರ ಹೋಗುವನೋ, ಅಥವಾ ಎಲ್ಲ ಜ್ಞಾನಿಗಳೂ ಹೋಗುವರೋ? ಇದು ಎರಡನೆಯ ಪ್ರಶ್ನೆ.

ಎಲ್ಲರೂ ಹೋಗುತ್ತಾರೆ ಎಂದಾದರೂ ಅವರೆಲ್ಲರೂ ಬ್ರಹ್ಮನನ್ನು ಸಂ + ಅಶ್ನುತೇ = ಸರಿಯಾಗಿ ಅವನನ್ನು ಅನುಭವಿಸುವರೋ, ಅಥವಾ ಯಾವನಾದರೊಬ್ಬ ಮಾತ್ರ ಚೆನ್ನಾಗಿ ಬ್ರಹ್ಮನನ್ನು ಅನುಭವಿಸುವನೋ ? ಇದು ಮೂರನೆಯ ಪ್ರಶ್ನೆ. ಹೀಗೆ, ಒಟ್ಟು ಮೂರು ಪ್ರಶ್ನೆಗಳನ್ನು ತಿಳಿಯಬೇಕು. ಒಂದೋ, ಎರಡೋ ಪ್ರಶ್ನೆಗಳನ್ನು ಇಟ್ಟುಕೊಂಡರೆ ''ಅಥಾಽತೋಽನುಪ್ರಶ್ನಾಃ'' ಎಂಬ ಬಹುವಚನ ಸರಿಯಾಗುವುದಿಲ್ಲ.

**ಸಮಾಧಿಮಾಹ ಬ್ರಹ್ಮಾ - ಉ ಇತಿ । ಅಭ್ಯುಪಗಮವಾಚೀ ಅಯಂ ಉಕಾರಃ। ಸರ್ವೋಽಪಿ ಜ್ಞಾನೀ ಸಮ್ಯಗಶ್ನುತೇ ಕಶ್ಚಿದೇವ ವಾ ಸಮ್ಯಗಶ್ನುತೇ ? ಇತಿ ಚರಮ ಪ್ರಶ್ನಾನಂತರಂ 'ಉ' ಇತ್ಯುಕ್ತ್ವಾ, ಕಶ್ಚಿದೇವ ಜ್ಞಾನೀ ವಿರಿಂಚ ಪದಯೋಗ್ಯಃ ಸಮಶ್ನುತೇ ಇತಿ ಪಕ್ಷಸ್ಯ ಅಂಗೀಕಾರ ಪ್ರಾಪ್ತ್ಯಾ ಅಜ್ಞಾನೀ ನೈವ ಬ್ರಹ್ಮಾಪ್ನೋತಿ, ಜ್ಞಾನಿನೋ ಅಖಿಲಾಃ ಪ್ರಾಪ್ನುವಂತಿ ಇತ್ಯರ್ಥಸ್ಯ ಲಾಭಾತ್ । ಅನ್ಯಥಾ ಜ್ಞಾನೀ, ಕಶ್ಚಿದಿತಿ, ಸಮಿತಿ ಚ ವಿಶೇಷಣ ವೈಯರ್ಥ್ಯಾಪಾತಾತ್ ॥ ೧೩ ॥**

ವರುಣನ ಪ್ರಶ್ನೆಗೆ ಬ್ರಹ್ಮದೇವರ ಸಮಾಧಾನ "ಉ" ಎಂದು. 'ಹೂಂ' ಎಂಬ ಒಪ್ಪಿಗೆಯನ್ನು ಸೂಚಿಸುವ ಶಬ್ದ 'ಉ' ಎಂಬುದು. ವರುಣನ ಕೊನೆಯ ಪ್ರಶ್ನೆ ಎಲ್ಲಾ ಜ್ಞಾನಿಗಳಿಗೂ ಚೆನ್ನಾಗಿಯೇ ಬ್ರಹ್ಮಪ್ರಾಪ್ತಿ ಇದೆಯೋ, ಅಥವಾ ಬ್ರಹ್ಮಪದವಿಗೆ ಅರ್ಹನಾದ ಒಬ್ಬ ಜ್ಞಾನಿಗೆ ಮಾತ್ರವೋ? ಎಂಬ ಪ್ರಶ್ನೆಗೆ 'ಹೂಂ' ಎಂದು ಉತ್ತರಿಸಿರುವುದರಿಂದ ಒಬ್ಬನೇ ಚೆನ್ನಾಗಿ ಬ್ರಹ್ಮನ ಬಳಿ ಸೇರುತ್ತಾನೆ, ಅಜ್ಞಾನಿಗಳು ಹೋಗುವುದೇ ಇಲ್ಲ, ಜ್ಞಾನಿಗಳು ಎಲ್ಲರೂ ಮುಕ್ತರಾಗುತ್ತಾರೆ ಎಂದು ಮೂರೂ ಉತ್ತರವೂ ಸಿಕ್ಕಿದಂತೆ. ಆ ಉದ್ದೇಶದಿಂದಲೇ ಪ್ರಶ್ನೆಯಲ್ಲಿ ವಿದ್ವಾನ್, ಕಶ್ಚಿತ್ (ಒಬ್ಬ) ಸಮ್ (ಚೆನ್ನಾಗಿ) ಈ ಮೂರೂ ಪದಗಳನ್ನು ಬಳಸಲಾಗಿದೆ. ಈ ಉದ್ದೇಶವಿಲ್ಲದಿರುತ್ತಿದ್ದರೆ ಈ ಮೂರೂ ಪದಗಳು ವ್ಯರ್ಥವಾದಾವು.॥ ೧೩ ॥

**ಸೋಽಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಇದꣳಸರ್ವಮಸೃಜತ । ಯದಿದಂ ಕಿಂಚ । ತತ್ ಸೃಷ್ಟ್ವಾ । ತದೇವಾನು ಪ್ರಾವಿಶತ್ । ತದನು ಪ್ರವಿಶ್ಯ । ಸಚ್ಚ ತ್ಯಚ್ಚಾಭವತ್ । ನಿರುಕ್ತಂ ಚಾನಿರುಕ್ತಂ ಚ । ನಿಲಯನಂ ಚಾನಿಲಯನಂ ಚ । ವಿಜ್ಞಾನಂ ಚಾವಿಜ್ಞಾನಂ ಚ । ಸತ್ಯಂ ಚಾನೃತಂ ಚ ಸತ್ಯಮಭವತ್ । ಯದಿದಂ ಕಿಂ ಚ । ತತ್ ಸತ್ಯಮಿತ್ಯಾಚಕ್ಷತೇ ॥ ೧೪ ॥**

'ಆತ್ಮನಃ ಆಕಾಶಃ' ಎಂದು ಪ್ರಾರಂಭದಲ್ಲಿ ಪ್ರಸ್ತುತನಾದ ಆತ್ಮನು, ಈ ಜಗತ್ತನ್ನು ಸೃಷ್ಟಿ ಮಾಡುವೆನು, ಸೃಷ್ಟವಾದ ವಸ್ತುಗಳಿಗೆ ನಿಯಾಮಕನಾಗಿ ಅನೇಕ ರೂಪಗಳನ್ನು ತಾಳುವೆನು, ಎಂದು ಬಯಸಿದನು. ಹೀಗೆ ಬಯಸಿ ಅವನು ಯೋಚಿಸಿದನು. ಯೋಚಿಸಿ ಈ ಜಗತ್ತನ್ನು ಸೃಷ್ಟಿ ಮಾಡಿದನು. ಸೃಷ್ಟಿಮಾಡಿ ಅದರೊಳಗೆ ಪ್ರವೇಶಿಸಿದನು. ಪ್ರವೇಶ ಮಾಡಿ 'ಸತ್' ಎಂಬ ಹೆಸರನ್ನು ಪಡೆದು ಸತ್ ಶಬ್ದದಿಂದ ವಾಚ್ಯವಾದ ಲಕ್ಷ್ಮೀ, ಬ್ರಹ್ಮ, ಪ್ರಾಣ ಈ ಮೂರಕ್ಕಿಂತ ಭಿನ್ನವಾದ ಜಗತ್ತಿಗೆ ಸತ್ ಎಂಬ ಹೆಸರನ್ನು ತಂದುಕೊಟ್ಟನು. 'ತ್ಯತ್' ನಾಮಕನಾಗಿ ತ್ಯತ್ ಶಬ್ದವಾಚ್ಯವಾದ ಚತುರ್ಮುಖನಲ್ಲಿ ನಿಂತನು. ನಿರುಕ್ತನಾಮಕನಾಗಿ ನಿರುಕ್ತವೆನಿದ ಲಕ್ಷ್ಮೀ, ಬ್ರಹ್ಮ, ಪ್ರಾಣರಿಗಿಂತ ಭಿನ್ನವಾದ ಜಗತ್ತಿನಲ್ಲಿ ಪ್ರವೇಶಿಸಿದನು. ನಿಲಯನ ನಾಮಕನಾಗಿ ನಿಲಯನ ನಾಮಕನಾದ ಚತುರ್ಮುಖನಲ್ಲಿ ಪ್ರವೇಶಿಸಿದನು. ಅನಿಲಯನ ನಾಮಕನಾಗಿ ಲಕ್ಷ್ಮೀ, ಬ್ರಹ್ಮ, ಪ್ರಾಣರಿಗಿಂತ ಭಿನ್ನವಾದ ಜಗತ್ತಿನಲ್ಲಿ ಪ್ರವೇಶಿಸಿದನು. ವಿಜ್ಞಾನನಾಮಕನಾಗಿ ವಿಜ್ಞಾನ ಎಂಬ ಹೆಸರಿನ ಚತುರ್ಮುಖ ಬ್ರಹ್ಮನಲ್ಲಿ ಪ್ರವೇಶ ಮಾಡಿದನು. ಅವಿಜ್ಞಾನ ಹೆಸರಿನಿಂದ ಅವಿಜ್ಞಾನ ನಾಮಕರಾದ ಲಕ್ಷ್ಮೀ, ಬ್ರಹ್ಮ, ಪ್ರಾಣಭಿನ್ನವಾದ ಜಗತ್ತಿನಲ್ಲಿ ಪ್ರವೇಶ ಮಾಡಿದನು. ಸತ್ಯ ನಾಮಕನಾಗಿ ಸತ್ಯಶಬ್ದವಾಚ್ಯರಾದ ಲಕ್ಷ್ಮೀಪ್ರಾಣರಲ್ಲಿ ಸೇರಿದನು. ಅನೃತನಾಮಕನಾಗಿ 'ಅನೃತ' ಶಬ್ದವಾಚ್ಯವಾದ ಲಕ್ಷ್ಮೀ, ಬ್ರಹ್ಮ, ಪ್ರಾಣಭಿನ್ನವಾದ ಜಗತ್ತಿನಲ್ಲಿ ಪ್ರವೇಶ ಮಾಡಿದನು. ಹೀಗೆ ಸಕಲ ವಿಧವಾದ ಜಗತ್ತಿನಲ್ಲಿ ಪ್ರವೇಶ ಮಾಡಿದರೂ ಆ ಬ್ರಹ್ಮನು ಜಗತ್ತಿನಲ್ಲಿರುವ ದೋಷಗಳ ಸಂಬಂಧವಿಲ್ಲದೆ ತಾನು ನಿರ್ದೋಷ ಸದ್ಗುಣ ರೂಪನಾಗಿಯೇ ಉಳಿದಿದ್ದಾನೆ.

ಇದುವರೆಗೆ ಸತ್ಯ ಅನೃತ ಮುಂತಾದ ಶಬ್ದಗಳಿಂದ ಬ್ರಹ್ಮನು ವಾಚ್ಯನೆಂದು ಹೇಳಿರುವುದೆಲ್ಲಾ ಸತ್ಯವೇ ಆಗಿದೆ ಎಂದು ಜ್ಞಾನಿಗಳು ಹೇಳುತ್ತಾರೆ.

**ಸಃ = ಆತ್ಮಾ । ಪ್ರಜಾಯೇಯ ಅಂತರ್ಣೀತಾರ್ಥೋಽಯಮ್ । ಜಗತ್ ಪ್ರಜಾಯೇಯ = ಜಗತ್ ಸೃಜಾನಿ, ತನ್ನಿಯಾಮಕತಯಾ ಚ ಅಹಂ, ಬಹುಸ್ಯಾಂ = ಬಹುರೂಪಃ, ಸ್ಯಾಂ = ಭವೇಯಮ್, ಇತಿ ಅಕಾಮಯತ = ಐಚ್ಛತ್ ಇತ್ಯರ್ಥಃ । ಯದ್ವಾ ಪ್ರಜಾಯೇಯ = ಪ್ರಾದುರ್ಭವಾನಿ ಇತ್ಯರ್ಥಃ ।**

'ಸೋಽಕಾಮಯತ' ಇಲ್ಲಿ ಸಃ ಎಂದರೆ ಇದುವರೆಗೆ ಪ್ರಸ್ತುತನಾದ ಆತ್ಮನು ಎಂದು ಅರ್ಥ. 'ಪ್ರಜಾಯೇಯ' ಇದು ಪ್ರೇರಣಾರ್ಥಕವಾದ 'ಣಿಚ್'

ಪ್ರತ್ಯಯದ ಅರ್ಥವನ್ನು ಹೇಳುತ್ತದೆ. ಅದಕ್ಕೆ ತೋರುವ ಅರ್ಥ ಹುಟ್ಟುತ್ತೇನೆ, ಎಂದು. ಆದರೆ ಹುಟ್ಟಿಸುತ್ತೇನೆ, ಸೃಷ್ಟಿ ಮಾಡುತ್ತೇನೆ ಎಂದು ಅದರ ಪ್ರಕೃತಾರ್ಥ. ಅಷ್ಟೇ ಅಲ್ಲ, ಸೃಷ್ಟಿ ಮಾಡಿದ ಜಗತ್ತನ್ನು ನಿಯಮಿಸುವ ಸಲುವಾಗಿ ನಾನು ಅನೇಕ ರೂಪಗಳನ್ನು ತಾಳುತ್ತೇನೆ ಎಂದು ಆತ್ಮನು ಬಯಸಿದನು. ಅಥವಾ, ಪ್ರಜಾಯೇಯ ಎಂದರೆ ಹಿಂದೆ ಹೇಳಿದಂತೆ ಸೃಷ್ಟಿ ಮಾಡುತ್ತೇನೆ ಎಂದು ಅರ್ಥವಲ್ಲ, ನಾನು ಬಹುರೂಪನಾಗಿ ಆವಿರ್ಭವಿಸುತ್ತೇನೆ, ಎಂದು ಸಂಕಲ್ಪ ಮಾಡಿದನು, ಎಂದು ಅರ್ಥ.

**ಸಃ ತಪಃ = ಆಲೋಚನಂ, ಅತಪ್ಯತ = ಅಕರೋತ್, ಜಗತ್ ಸೃಷ್ಟ್ವಾ ತನ್ನಿಯಾಮಕತಯಾ ಬಹುರೂಪೋ ಭವಾನಿ ಇತಿ ವ್ಯಚಿಂತಯತ್, ಇತ್ಯರ್ಥಃ । ಸಃ ತಪಃ ತಪ್ತ್ವಾ = ಪರ್ಯಾಲೋಚ್ಯ, ಯದಿದಂ ಕಿಂಚ ಜಗದಸ್ತಿ ತತ್ ಸರ್ವಂ ಅಸೃಜತ । ಸ್ವೋದರಸ್ಥಂ ಜಗತ್ ಬಹಿಃ ನಿರ್ಯಾಪಯಾಮಾಸ ಇತ್ಯರ್ಥಃ । ಸ್ವೋದರಾತ್ ಬಹಿಃ ನಿಷ್ಕ್ರಾಮಣರೂಪತ್ವಾತ್ ಸೃಷ್ಟೇಃ ।**

ಆ ಆತ್ಮನು, ತಪಃ = ಯೋಚನೆಯನ್ನು ಅತಪ್ಯತ = ಮಾಡಿದನು. ಈ ಜಗತ್ತನ್ನು ಸೃಷ್ಟಿ ಮಾಡಿ ಅದಕ್ಕೆ ನಿಯಾಮಕನಾಗಿ ಅನೇಕ ರೂಪಗಳನ್ನು ತಾಳುತ್ತೇನೆ ಎಂದು ಯೋಚಿಸಿದನು, ಎಂದು ಅರ್ಥ. ಅವನು ಹೀಗೆ ತಪಃ ತಪ್ತ್ವಾ = ಯೋಚನೆ ಮಾಡಿ, ಈ ಎಲ್ಲ ಜಗತ್ತೇನಿದೆಯೋ ಅವೆಲ್ಲವನ್ನೂ ಸೃಷ್ಟಿಮಾಡಿದನು. ಅಂದರೆ ಪ್ರಲಯಕಾಲದಲ್ಲಿ ತನ್ನ ಹೊಟ್ಟೆಯೊಳಗಿದ್ದ ಈ ಜಗತ್ತನ್ನು ಹೊರಹಾಕಿದನು ಎಂದರ್ಥ. ಸೃಷ್ಟಿ ಎಂದರೆ ಇಲ್ಲದ ವಸ್ತುಗಳ ನಿರ್ಮಾಣವಲ್ಲ, ಇದ್ದಿದ್ದನ್ನೇ ಹೊರ ಹಾಕುವುದು.

**ವಿಶೇಷಾರ್ಥ** - ಈ ಸಂದರ್ಭದಲ್ಲಿ ಶ್ರೀವಾದಿರಾಜರು ಸೃಷ್ಟಿಯ ಕುರಿತು ಹೀಗೆ ಹೇಳಿದ್ದಾರೆ - ಪ್ರಲಯಕಾಲದಲ್ಲಿ ಮೂಲರೂಪದ ನಾರಾಯಣ ಒಬ್ಬನೇ ಇದ್ದನು. ಅವನ ಉದರದಲ್ಲೇ ಈ ಜಗತ್ತು ಇದ್ದರೂ ಅವನು ತಾನಾಗಿಯೇ ಈ ಜಗತ್ತನ್ನು ಹೊರಹಾಕುವುದಿಲ್ಲ. ತನ್ನದೇ ಆದ ಪುರುಷರೂಪದ ಉದರದಲ್ಲಿ ಹಾಕುತ್ತಾನೆ. ಇದನ್ನು ಆಚಾರ್ಯರು ಇದೇ ಉಪನಿಷತ್ತಿನ ಭಾಷ್ಯದಲ್ಲಿ ತಿಳಿಸಿದ್ದಾರೆ-

ಯದ್ಯಪೀದಂ ಜಗತ್ಸರ್ವಂ ಸ್ವೋದರಸ್ಥಂ ಮಹಾತ್ಮನಃ ।
ತಥಾಪ್ಯೇತದ್ ದ್ವಿತೀಯೇನ ರೂಪೇಣ ಬಹಿರಾಕ್ಷಿಪೇತ್ ॥

ಭಾಗವತದಲ್ಲೂ ಹೀಗಿದೆ -

ಜಗೃಹೇ ಪೌರುಷಂ ರೂಪಂ ಭಗವಾನ್ ಮಹದಾದಿಭಿಃ ।
ಸಂಭೂತಂ ಷೋಡಶಕಲಂ ಆದೌ ಲೋಕಸಿಸೃಕ್ಷಯಾ ॥

ಮೂಲರೂಪದ ನಾರಾಯಣನು ಮಹತ್ತತ್ವಾದಿಗಳ ಸೂಕ್ಷ್ಮರೂಪದೊಂದಿಗೆ ಪುರುಷರೂಪವನ್ನು ಸ್ವೀಕರಿಸಿದ, ಎಂದು ಈ ಶ್ಲೋಕದ ಅರ್ಥ. ಮಹತ್ತತ್ವಾದಿಗಳಿಂದ ಪುರುಷರೂಪವನ್ನು ಸ್ವೀಕರಿಸಿದ ಎಂದಲ್ಲ. ಏಕೆಂದರೆ, ಆಗ ಸೃಷ್ಟಿಯೋಗ್ಯವಾದ ಮಹತ್ತತ್ವಾದಿಗಳೇ ಇರಲಿಲ್ಲ. ಆದ್ದರಿಂದ ಪರಮಾತ್ಮನ ಪುರುಷರೂಪದ ಉದರದಿಂದಲೇ ಜಗತ್ತಿನ ಸೃಷ್ಟಿ.

**ತತ್ ಜಗತ್ ಸೃಷ್ಟ್ವಾ, ತದೇವಾನು ತತ್ = ಸೃಷ್ಟಂ ಅನ್ವೇವ ಪ್ರಾವಿಶತ್ । ಪ್ರವಿಶ್ಯ ಕಿಮಭವತ್ ? ಇತ್ಯತಃ ಸತ್ವಾದಿಗುಣಯೋಗೇನ ಸದಾದಿಪದವಾಚ್ಯಃ ಸನ್ ಸ್ವಸಂಬಂಧೇನ ಜಗತೋಽಪಿ ಸದಾದಿ ಶಬ್ದವಾಚ್ಯತಾ ಸಂಪಾದಕಃ ಅಭವತ್ ಇತ್ಯಾಹ - ಸಚ್ಚೇತ್ಯಾದಿನಾ ॥**

ಈ ಜಗತ್ತನ್ನು ಸೃಷ್ಟಿ ಮಾಡಿ, ತದೇವಾನು = ತಾನು ಸೃಷ್ಟಿ ಮಾಡಿದಂತೆಯೇ, ಅದೇ ಕ್ರಮದಲ್ಲಿ, ಪ್ರಾವಿಶತ್ = ತನ್ನಿಂದ ಸೃಷ್ಟಿಗೊಂಡ ತತ್ತ್ವಗಳಲ್ಲಿ ಪ್ರವೇಶಿಸಿದನು.

ಪ್ರವೇಶ ಮಾಡಿ ಏನು ಮಾಡಿದ? ''ಸತ್ವ, ಅಸತ್ವ'' ಮೊದಲಾದ ಗುಣಗಳು ಇರುವುದರಿಂದ ಅವನು ಸತ್, ಅಸತ್ ಎಂಬ ಶಬ್ದಗಳಿಂದ ವಾಚ್ಯನಾಗಿ ಆ ಹೆಸರಿರುವ ತನ್ನ ಸಂಪರ್ಕದಿಂದಾಗಿ ಜಗತ್ತಿಗೂ ಅದೇ ಹೆಸರನ್ನು ತಂದುಕೊಟ್ಟ. ಈ ವಿಷಯವನ್ನು 'ಸಚ್ಚ ತ್ಯಚ್ಚಾಭವತ್' ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ಹೇಳಲಾಗಿದೆ.

**ಸೀದತಿ = ಅವಸಾದಯತೀತಿ - ಸತ್, ಸನ್ನಾಮಾ ಸನ್ ಸನ್ನಾಮಕ ಜಗದ್‌ಗತೋ ಅಭವತ್ ಇತ್ಯರ್ಥಃ । ಏವಮಗ್ರೇಽಪಿ । ಷದ್‌ಲೃ = ವಿಸರಣ-ಗತಿ-ಅವಸಾದನೇಷು ಇತ್ಯತೋ ಅಂತರ್ಣೀತಾರ್ಥಾತ್ ಕ್ವಿಪ್ ।**

**ತತಃ, ನಿಯಾಮಕಶ್ಚ ಇತಿ ತ್ಯತ್ । ತ್ಯತ್-ನಾಮಾ ಸನ್ ತ್ಯನ್ನಾಮಕ ಜಗದ್ಗತೋ ಅಭವತ್ । 'ತನು=ವಿಸ್ತಾರೇ' ಇತ್ಯತೋ ಡ್ವಿಚ್ ಪ್ರತ್ಯಯಃ ಕರ್ತರಿ । 'ಯಾ = ಪ್ರಾಪಣೇ' ಇತ್ಯತೋ 'ಡತ್' ಪ್ರತ್ಯಯಃ, ಕರ್ಮಧಾರಯಃ ।**

ಪರಮಾತ್ಮನಿಗೆ ಸತ್ ಎಂಬ ಹೆಸರಿದೆ. ಏಕೆಂದರೆ ಅವನು ಈ ಜಗತ್ತಿಗೆ ಸಂಹಾರಕನಾಗಿದ್ದಾನೆ. 'ಸೀದತಿ ಇತಿ = ಸತ್' ಇದು ಸತ್ ಶಬ್ದದ ನಿರುಕ್ತಿ. ಸೀದತಿ ಎಂದರೆ ನಾಶ ಮಾಡುತ್ತಾನೆ ಎಂದರ್ಥ.

ಹೀಗೆ ಭಗವಂತನಿಗೆ ಸತ್ ಎಂಬ ಹೆಸರು ಇರುವುದರಿಂದ ಅವನು ಒಳಸೇರಿಕೊಂಡ ವಸ್ತುಗಳಿಗೂ ಅದೇ ಹೆಸರು ಬರುತ್ತದೆ. ಇದರಂತೆ ಮುಂದಿನ ಶಬ್ದಗಳಲ್ಲೂ ತಿಳಿಯಬೇಕು.

'ಸತ್' ಎಂಬ ಶಬ್ದದ ಮೂಲಧಾತು ''ಷದ್‌ಲೃ''. ಅದಕ್ಕೆ ಪಸರಿಸು, ಹೋಗು, ನಾಶಮಾಡು ಎಂದು ಅರ್ಥ. 'ನಾಶಮಾಡು' ಎಂಬ ಅರ್ಥದಲ್ಲಿ ಅದನ್ನು ತೆಗೆದುಕೊಂಡಾಗ ಆ ಧಾತುವಿಗೆ 'ಕ್ವಿಪ್' ಪ್ರತ್ಯಯ ಬಂದು 'ಸತ್' ಎಂದು ರೂಪವಾಗುತ್ತದೆ. ಅಷ್ಟೇ ಅಲ್ಲದೆ, ಆ ಧಾತುವಿಗೆ ಪ್ರೇರಣಾರ್ಥದಲ್ಲಿ 'ಣಿಚ್' ಪ್ರತ್ಯಯ ಬಂದು ಲೋಪವಾಗಿದೆ. ಹೀಗಾಗಿ 'ಸಾದಯತಿ ಇತಿ-ಸತ್' ಎಂದಾಗಿದೆ. 'ನಾಶಕ' ಎಂದು ಅರ್ಥ.

ಇದರಂತೆ 'ತ್ಯತ್' ಎಂಬ ಶಬ್ದದಲ್ಲಿ ತಕಾರ ಮತ್ತು ಯತ್ ಎಂಬ ಎರಡು ಭಾಗವಿದೆ. 'ವಿಸ್ತರಿಸು' ಎಂಬ ಅರ್ಥದ 'ತನು' ಧಾತುವಿನ ರೂಪ 'ತ್'. ಆ ಧಾತುವಿಗೆ 'ಡ್ವಿಚ್' ಪ್ರತ್ಯಯ ಬಂದು 'ತ್' ಎಂದು ರೂಪವಾಗಿದೆ. 'ಹೋಗುವುದು' ಎಂಬ ಅರ್ಥದ 'ಯಾ' ಧಾತುವಿಗೆ 'ಡತ್' ಪ್ರತ್ಯಯ ಬಂದು 'ಯತ್' ಎಂದಾಗಿದೆ. 'ತ್ + ಯತ್ = ತ್ಯತ್' ತ = ವ್ಯಾಪಿಸಿದವನು. ಯತ್ = ನಿಯಾಮಕನಾಗಿರುವವನು 'ತ್ ಚ ಯಚ್ಚ ತ್ಯತ್' ಎಂದು ಕರ್ಮಧಾರಯಸಮಾಸ.

ತಾನು ವ್ಯಾಪ್ತನಾಗಿ ನಿಯಾಮಕನಾದ ಕಾರಣ 'ತ್ಯತ್' ಎಂದೆನಿಸಿ ತಾನಿರುವ ಜಗತ್ತಿಗೂ 'ತ್ಯತ್' ಎಂಬ ಹೆಸರನ್ನು ತಂದಿತ್ತಿದ್ದಾನೆ ಎಂದು ಅರ್ಥ.

**ಜಗತೋ ನಿರುಕ್ತತ್ವ ಪ್ರದತ್ವಾತ್ ನಿರುಕ್ತನಾಮಾ ಸನ್ ನಿರುಕ್ತ ವಸ್ತುಗತೋಽಭವತ್ ।**

**ನಿರ್ವಕ್ತುಂ ಅಶಕ್ಯತ್ವ ಹೇತೋಃ ಅನಿರುಕ್ತನಾಮಾ ಸನ್ ಅನಿರುಕ್ತ-ಜಗದ್ಗತೋ ಅಭವತ್ ।**

ಜಗತ್ತಿಗೆ ನಾಮಪ್ರದನಾದುದರಿಂದ 'ನಿರುಕ್ತ' ಎಂಬ ಹೆಸರನ್ನು ತಾನು ಪಡೆದು 'ನಿರುಕ್ತ' ವಸ್ತುಗಳಲ್ಲಿ ಸೇರಿಕೊಂಡನು.

ಭಾಗವತದಲ್ಲೂ ಹೀಗಿದೆ -

ಜಗೃಹೇ ಪೌರುಷಂ ರೂಪಂ ಭಗವಾನ್ ಮಹದಾದಿಭಿಃ ।
ಸಂಭೂತಂ ಷೋಡಶಕಲಂ ಆದೌ ಲೋಕಸಿಸೃಕ್ಷಯಾ ॥

ಮೂಲರೂಪದ ನಾರಾಯಣನು ಮಹತ್ತತ್ತ್ವಾದಿಗಳ ಸೂಕ್ಷ್ಮರೂಪದೊಂದಿಗೆ ಪುರುಷರೂಪವನ್ನು ಸ್ವೀಕರಿಸಿದ, ಎಂದು ಈ ಶ್ಲೋಕದ ಅರ್ಥ. ಮಹತ್ತತ್ತ್ವಾದಿಗಳಿಂದ ಪುರುಷರೂಪವನ್ನು ಸ್ವೀಕರಿಸಿದ ಎಂದಲ್ಲ. ಏಕೆಂದರೆ, ಆಗ ಸೃಷ್ಟಿಯೋಗ್ಯವಾದ ಮಹತ್ತತ್ತ್ವಾದಿಗಳೇ ಇರಲಿಲ್ಲ. ಆದ್ದರಿಂದ ಪರಮಾತ್ಮನ ಪುರುಷರೂಪದ ಉದರದಿಂದಲೇ ಜಗತ್ತಿನ ಸೃಷ್ಟಿ.

**ತತ್ ಜಗತ್ ಸೃಷ್ಟ್ವಾ, ತದೇವಾನು ತತ್ = ಸೃಷ್ಟಂ ಅನ್ವೇವ ಪ್ರಾವಿಶತ್ । ಪ್ರವಿಶ್ಯ ಕಿಮಭವತ್ ? ಇತ್ಯತಃ ಸತ್ವಾದಿಗುಣಯೋಗೇನ ಸದಾದಿಪದವಾಚ್ಯಃ ಸನ್ ಸ್ವಸಂಬಂಧೇನ ಜಗತೋಽಪಿ ಸದಾದಿ ಶಬ್ದವಾಚ್ಯತಾ ಸಂಪಾದಕಃ ಅಭವತ್ ಇತ್ಯಾಹ - ಸಚ್ಚೇತ್ಯಾದಿನಾ ॥**

ಈ ಜಗತ್ತನ್ನು ಸೃಷ್ಟಿ ಮಾಡಿ, ತದೇವಾನು = ತಾನು ಸೃಷ್ಟಿ ಮಾಡಿದಂತೆಯೇ, ಅದೇ ಕ್ರಮದಲ್ಲಿ, ಪ್ರಾವಿಶತ್ = ತನ್ನಿಂದ ಸೃಷ್ಟಿಗೊಂಡ ತತ್ತ್ವಗಳಲ್ಲಿ ಪ್ರವೇಶಿಸಿದನು.

ಪ್ರವೇಶ ಮಾಡಿ ಏನು ಮಾಡಿದ? ''ಸತ್ವ, ಅಸತ್ವ'' ಮೊದಲಾದ ಗುಣಗಳು ಇರುವುದರಿಂದ ಅವನು ಸತ್, ಅಸತ್ ಎಂಬ ಶಬ್ದಗಳಿಂದ ವಾಚ್ಯನಾಗಿ ಆ ಹೆಸರಿರುವ ತನ್ನ ಸಂಪರ್ಕದಿಂದಾಗಿ ಜಗತ್ತಿಗೂ ಅದೇ ಹೆಸರನ್ನು ತಂದುಕೊಟ್ಟ. ಈ ವಿಷಯವನ್ನು 'ಸಚ್ಚ ತ್ಯಚ್ಚಾಭವತ್' ಇತ್ಯಾದಿಯಾಗಿ ಉಪನಿಷತ್ತಿನಲ್ಲಿ ಹೇಳಲಾಗಿದೆ.

**ಸೀದತಿ = ಅವಸಾದಯತೀತಿ - ಸತ್, ಸನ್ನಾಮಾ ಸನ್ ಸನ್ನಾಮಕ ಜಗದ್ಗತೋ ಅಭವತ್ ಇತ್ಯರ್ಥಃ । ಏವಮಗ್ರೇಽಪಿ । ಷದ್ಲೃ = ವಿಸರಣ-ಗತಿ-ಅವಸಾದನೇಷು ಇತ್ಯತೋ ಅಂತರ್ಣೀತಾರ್ಥಾತ್ ಕ್ವಿಪ್ ।**

**ತತಃ, ನಿಯಾಮಕಶ್ಚ ಇತಿ ತ್ಯತ್ । ತ್ಯತ್-ನಾಮಾ ಸನ್ ತ್ಯನ್ನಾಮಕ ಜಗದ್ಗತೋ ಅಭವತ್ । 'ತನು=ವಿಸ್ತಾರೇ' ಇತ್ಯತೋ ಡ್ವಿಚ್ ಪ್ರತ್ಯಯಃ ಕರ್ತರಿ । 'ಯಾ = ಪ್ರಾಪಣೇ' ಇತ್ಯತೋ 'ಡತ್' ಪ್ರತ್ಯಯಃ, ಕರ್ಮಧಾರಯಃ ।**

ಪರಮಾತ್ಮನಿಗೆ ಸತ್ ಎಂಬ ಹೆಸರಿದೆ. ಏಕೆಂದರೆ ಅವನು ಈ ಜಗತ್ತಿಗೆ ಸಂಹಾರಕನಾಗಿದ್ದಾನೆ. 'ಸೀದತಿ ಇತಿ = ಸತ್' ಇದು ಸತ್ ಶಬ್ದದ ನಿರುಕ್ತಿ. ಸೀದತಿ ಎಂದರೆ ನಾಶ ಮಾಡುತ್ತಾನೆ ಎಂದರ್ಥ.

ಹೀಗೆ ಭಗವಂತನಿಗೆ ಸತ್ ಎಂಬ ಹೆಸರು ಇರುವುದರಿಂದ ಅವನು ಒಳಸೇರಿಕೊಂಡ ವಸ್ತುಗಳಿಗೂ ಅದೇ ಹೆಸರು ಬರುತ್ತದೆ. ಇದರಂತೆ ಮುಂದಿನ ಶಬ್ದಗಳಲ್ಲೂ ತಿಳಿಯಬೇಕು.

'ಸತ್' ಎಂಬ ಶಬ್ದದ ಮೂಲಧಾತು ''ಷದ್‌ಲೃ''. ಅದಕ್ಕೆ ಪಸರಿಸು, ಹೋಗು, ನಾಶಮಾಡು ಎಂದು ಅರ್ಥ. 'ನಾಶಮಾಡು' ಎಂಬ ಅರ್ಥದಲ್ಲಿ ಅದನ್ನು ತೆಗೆದುಕೊಂಡಾಗ ಆ ಧಾತುವಿಗೆ 'ಕ್ವಿಪ್' ಪ್ರತ್ಯಯ ಬಂದು 'ಸತ್' ಎಂದು ರೂಪವಾಗುತ್ತದೆ. ಅಷ್ಟೇ ಅಲ್ಲದೆ, ಆ ಧಾತುವಿಗೆ ಪ್ರೇರಣಾರ್ಥದಲ್ಲಿ 'ಣಿಚ್' ಪ್ರತ್ಯಯ ಬಂದು ಲೋಪವಾಗಿದೆ. ಹೀಗಾಗಿ 'ಸಾದಯತಿ ಇತಿ-ಸತ್' ಎಂದಾಗಿದೆ. 'ನಾಶಕ' ಎಂದು ಅರ್ಥ.

ಇದರಂತೆ 'ತ್ಯತ್' ಎಂಬ ಶಬ್ದದಲ್ಲಿ ತಕಾರ ಮತ್ತು ಯತ್ ಎಂಬ ಎರಡು ಭಾಗವಿದೆ. 'ವಿಸ್ತರಿಸು' ಎಂಬ ಅರ್ಥದ 'ತನು' ಧಾತುವಿನ ರೂಪ 'ತ್'. ಆ ಧಾತುವಿಗೆ 'ಡ್ವಿಚ್' ಪ್ರತ್ಯಯ ಬಂದು 'ತ್' ಎಂದು ರೂಪವಾಗಿದೆ. 'ಹೋಗುವುದು' ಎಂಬ ಅರ್ಥದ 'ಯಾ' ಧಾತುವಿಗೆ 'ಡತ್' ಪ್ರತ್ಯಯ ಬಂದು 'ಯತ್' ಎಂದಾಗಿದೆ. 'ತ್ + ಯತ್ = ತ್ಯತ್' ತ = ವ್ಯಾಪಿಸಿದವನು. ಯತ್ = ನಿಯಾಮಕನಾಗಿರುವವನು 'ತ್ ಚ ಯಚ್ಚ ತ್ಯತ್' ಎಂದು ಕರ್ಮಧಾರಯಸಮಾಸ.

ತಾನು ವ್ಯಾಪ್ತನಾಗಿ ನಿಯಾಮಕನಾದ ಕಾರಣ 'ತ್ಯತ್' ಎಂದೆನಿಸಿ ತಾನಿರುವ ಜಗತ್ತಿಗೂ 'ತ್ಯತ್' ಎಂಬ ಹೆಸರನ್ನು ತಂದಿತ್ತಿದ್ದಾನೆ ಎಂದು ಅರ್ಥ.

**ಜಗತೋ ನಿರುಕ್ತತ್ವ ಪ್ರದತ್ವಾತ್ ನಿರುಕ್ತನಾಮಾ ಸನ್ ನಿರುಕ್ತ ವಸ್ತುಗತೋಽಭವತ್ ।**

**ನಿರ್ವಕ್ತುಂ ಅಶಕ್ಯತ್ವ ಹೇತೋಃ ಅನಿರುಕ್ತನಾಮಾ ಸನ್ ಅನಿರುಕ್ತ-ಜಗದ್ಗತೋ ಅಭವತ್ ।**

ಜಗತ್ತಿಗೆ ನಾಮಪ್ರದನಾದುದರಿಂದ 'ನಿರುಕ್ತ' ಎಂಬ ಹೆಸರನ್ನು ತಾನು ಪಡೆದು 'ನಿರುಕ್ತ' ವಸ್ತುಗಳಲ್ಲಿ ಸೇರಿಕೊಂಡನು.

ಅವನು ಅನಂತನಾದುದರಿಂದ ಅವನನ್ನು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಆದ್ದರಿಂದ ಅವನಿಗೆ ಅನಿರುಕ್ತ ಎಂದು ಹೆಸರು. ಆ ಹೆಸರಿನಿಂದ ಜಗತ್ತಿನೊಳಗೆ ಸೇರಿ ತಾನು ಸೇರಿದ ವಸ್ತುಗಳಿಗೂ ಅದೇ ಹೆಸರನ್ನು ತಂದಿತ್ತ.

**ಸರ್ವಾಧಾರತ್ವಾತ್ ನಿಲಯನ ನಾಮಾ ಸನ್ ನಿಲಯನ ಜಗದ್ ಗತಃ ಅಭವತ್ । ಶ್ರೀ-ಬ್ರಹ್ಮ-ಪ್ರಾಣೇಭ್ಯಃ ಅನ್ಯಜಗತಃ ಅಸಾಧುತಾ ಪ್ರದತ್ವಾತ್ ಅನಿಲಯನ ನಾಮಾ ಸನ್ ತನ್ನಾಮಕ ವಸ್ತುಗತಃ ಅಭವತ್ ।**

ಪರಮಾತ್ಮನು ಎಲ್ಲದಕ್ಕೂ ಆಧಾರನಾದುದರಿಂದ 'ನಿಲಯನ' ಎನಿಸಿದ್ದಾನೆ. ಆ ಹೆಸರಿನಿಂದ ಅವನು ಸೇರಿಕೊಂಡ ಜಗತ್ತು ನಿಲಯನ ಎಂದೆನಿಸಿತು. ಲಕ್ಷ್ಮೀದೇವಿ, ಪ್ರಾಣದೇವ, ಬ್ರಹ್ಮದೇವ ಈ ಮೂವರಿಗಿಂತ ಭಿನ್ನವಾದ ಜಗತ್ತಿಗೆ ದೋಷವನ್ನು ಕೊಡುವುದರಿಂದ ಅವನು ಅನಿಲಯನ ಎನಿಸಿದ್ದಾನೆ. ಆ ಹೆಸರಿನಿಂದ ಪ್ರವೇಶ ಮಾಡಿ ಜಗತ್ತಿಗೂ ಅದೇ ಹೆಸರನ್ನು ತಂದು ಕೊಡುತ್ತಾನೆ.

**ಸರ್ವಂ ಜಾನಾತೀತಿ ವಿಜ್ಞಾನನಾಮಾ ಸನ್ ವಿಜ್ಞಾನನಾಮಕ ವಸ್ತುಗತಃ ಅಭವತ್ । ಜಗತಃ ಅವಿಜ್ಞಪ್ತಿ ದಾತೃತ್ವಾತ್ ಅವಿಜ್ಞಾನ ನಾಮಾ ಸನ್ ಅವಿಜ್ಞಾನಾಖ್ಯವಸ್ತುಗತಃ ಅಭವತ್ ।**

ಸರ್ವಂ ವಿಜಾನಾತೀತಿ = ವಿಜ್ಞಾನಃ. ಎಲ್ಲವನ್ನೂ ಬಲ್ಲವನಾದುದರಿಂದ ಅವನಿಗೆ ವಿಜ್ಞಾನ ಎಂದು ಹೆಸರು. ಆ ಹೆಸರುಳ್ಳ ಪರಮಾತ್ಮ ಅದೇ ಹೆಸರಿನ ವಸ್ತುಗಳ ಒಳಗೆ ಸೇರಿಕೊಂಡನು. ಬ್ರಹ್ಮಾದ್ಯತಿರಿಕ್ತರಿಗೆ ಅಜ್ಞಾನವನ್ನು ಕೊಡುವುದರಿಂದ ಅವಿಜ್ಞಾನ ಎಂದು ಅವನ ಹೆಸರು. ಆ ಹೆಸರಿನಿಂದ ಅವನು ಪ್ರವೇಶಿಸಿದ ವಸ್ತುಗಳು ಅವಿಜ್ಞಾನ ಎನಿಸಿತು.

**ಸಾಧು ಸ್ವರೂಪತ್ವಾತ್ ಸತ್ಯನಾಮಾ ಸನ್ ತನ್ನಾಮಕ ಜಗದ್‌ಗತಃ ಅಭವತ್ । ಜಗತಃ ದೌರ್ಬಲ್ಯ ದಾತೃತ್ವ ಹೇತುನಾ ಅನೃತನಾಮಾ ಅನೃತಾಖ್ಯವಸ್ತುಗತಃ ಅಭವತ್ ಇತ್ಯರ್ಥಃ ।**

ಮಂಗಳ ಸ್ವರೂಪನಾದ ಕಾರಣ ಅವನಿಗೆ 'ಸತ್ಯ' ಎಂದು ಹೆಸರು. ಆ ಹೆಸರಿನಿಂದ ಅದೇ ಹೆಸರುಳ್ಳ ಜಗತ್ತಿನೊಳಗೆ ಸೇರಿಕೊಂಡನು. ಜಗತ್ತಿಗೆ ದೌರ್ಬಲ್ಯವನ್ನು ಕೊಡುವುದರಿಂದ ಅವನು 'ಅನೃತ'. ಅದೇ ಹೆಸರಿನಿಂದ ಆ ಹೆಸರಿನ ಜಗತ್ತಿನೊಳಗೆ ಸೇರಿಕೊಂಡನು.

**ಅತ್ರ ತ್ಯತ್, ಅನಿರುಕ್ತಂ, ನಿಲಯನಂ, ವಿಜ್ಞಾನಮಿತಿ ಮಹಾನ್ ಬ್ರಹ್ಮೋಚ್ಯತೇ । ಸತ್ಯಮಿತಿ ಶ್ರೀ ಪ್ರಾಣರೂಪಂ ಜಗತ್ । ಸತ್ - ನಿರುಕ್ತ - ಅನಿಲಯನ - ಅವಿಜ್ಞಾನ - ಅನೃತಶಬ್ದೈಸ್ತು ಪ್ರಕೃತಿ - ಪ್ರಾಣ - ಮಹದ್‌ಭ್ಯಃ ಅನ್ಯಜಗತ್ ಇತಿ ಜ್ಞೇಯಮ್ ।**

ಇಲ್ಲಿ ತ್ಯತ್, ಅನಿರುಕ್ತ, ನಿಲಯನ, ವಿಜ್ಞಾನ ಈ ಶಬ್ದಗಳಿಗೆ ಮಹತ್ತತ್ತ್ವಾಭಿಮಾನಿ ಚತುರ್ಮುಖನೆಂದು ಅರ್ಥ. ಸತ್ಯ ಎಂದರೆ ಲಕ್ಷ್ಮೀದೇವಿ, ಮತ್ತು ಮುಖ್ಯಪ್ರಾಣ. ಸತ್, ನಿರುಕ್ತ, ಅನಿಲಯನ, ಅವಿಜ್ಞಾನ, ಅನೃತ ಈ ಶಬ್ದಗಳಿಗೆ ಲಕ್ಷ್ಮೀದೇವಿ, ಮುಖ್ಯಪ್ರಾಣ, ಮಹತ್ತತ್ತ್ವಾಭಿಮಾನಿ ಬ್ರಹ್ಮದೇವ ಇವರಿಗಿಂತ ಭಿನ್ನವಾದ ಜಗತ್ತು ಎಂದು ಅರ್ಥ.

**ತತ್ ಸರ್ವತ್ರ ಅನುಪ್ರವಿಷ್ಟಂ ರೂಪಂ ತದ್ದೋಷೇಣ ಲಿಪ್ಯತೇ ಕಿಮ್ ? ನೇತ್ಯಾಹ - ತತ್ ಸತ್ಯಮಭವತ್ ॥ ಸಾಧುಸ್ವರೂಪಂ ನಿರ್ದೋಷಸ್ವರೂಪಂ ಚ ತತ್ ಸತ್ಯನಾಮಾ ಅಭವತ್ ಇತ್ಯರ್ಥಃ । ಪ್ರಕೃತ್ಯಧಿಕರಣಾನುವ್ಯಾಖ್ಯಾನೇ ತು —**

**"ಸತ್ತ್ವಾತ್ ತತೇರ್ವೈದಿಕತ್ವಾತ್ ಸಮ್ಯಗ್ ವಕ್ತುಂ ಅಶಕ್ಯತಃ ।**
**ಆಶ್ರಯತ್ವಾತ್ ಸ್ವಾಶ್ರಯತ್ವಾತ್ ಜ್ಞಾನತ್ವಾದ್ ದುರ್ವಿದತ್ವತಃ ॥**
**ಸತ್ತೇರ್ಯಾತನಾಚ್ಚೈವ ಹ್ಯಪ್ರಾಪ್ಯತ್ವಾಚ್ಚ ದುರ್ಜನೈಃ ।**
**ನಿತ್ಯಸಾಧುಗುಣವ್ಯಾಪ್ತಿಯಂತೃರೂಪತ್ವತಃ ಸದಾ ।"**

**ಇತಿ ಪ್ರಕಾರಾಂತರೇಣ ಅರ್ಥಃ ಉಕ್ತಃ ।**

ಜಗತ್ತಿನ ಶುಭ-ಅಶುಭ ಎಲ್ಲಾ ವಸ್ತುಗಳಲ್ಲೂ ಸೇರಿಕೊಂಡಿರುವ ಆ ಬ್ರಹ್ಮನು ಆ ವಸ್ತುಗಳಲ್ಲಿರುವ ದೋಷದಿಂದ ತಾನೂ ದೋಷಪೂರ್ಣನಾಗುವನೇ? ಇಲ್ಲವೆನ್ನುತ್ತದೆ ಉಪನಿಷತ್ತು - 'ತತ್ ಸತ್ಯಮಭವತ್' ಎಂದು. ಅದರ ಅರ್ಥ - ಆ ಬ್ರಹ್ಮನು ಎಲ್ಲ ಕಡೆ ಇದ್ದರೂ ಸದ್ಗುಣರೂಪನಾಗಿ, ದೋಷರಹಿತನಾಗಿ 'ಸತ್ಯ' ಎಂದು ಕರೆಸಿಕೊಂಡೇ ಇರುತ್ತದೆ. ಅದರ ಸತ್ಯರೂಪಕ್ಕೆ ಚ್ಯುತಿ ಇಲ್ಲ, ಎಂದು.

ಪ್ರಕೃತ್ಯಧಿಕರಣದ (೧-೪-೬) ಅನುವ್ಯಾಖ್ಯಾನದಲ್ಲಿ ಸತ್, ತ್ಯತ್ ಮುಂತಾದ ಪದಗಳಿಗೆ ಹೀಗೆ ಅರ್ಥಗಳನ್ನು ಹೇಳಲಾಗಿದೆ-

ಸತ್ವಾತ್-ಉತ್ತಮತ್ವಾತ್ = ಉತ್ತಮನಾದುದರಿಂದ ಬ್ರಹ್ಮನು 'ಸತ್'. 'ತತೇಃ = ವ್ಯಾಪ್ತೇಃ ತ್ಯತ್' ವ್ಯಾಪ್ತನಾದುದರಿಂದ 'ತ್ಯತ್'. ''ವೈದಿಕತ್ವಾತ್ - ನಿರುಕ್ತಮ್'' ವೇದವೇದ್ಯನಾದುದರಿಂದ ನಿರುಕ್ತ. ''ನಿಶ್ಚಯೇನ ವಕ್ತುಂ ಅಶಕ್ಯತ್ವಾತ್ - ಹೀಗೆಯೇ, ಎಂದು ನಿರ್ಧಾರಿತವಾಗಿ ಹೇಳಲಾಗದ ಕಾರಣ ಅನಿರುಕ್ತ. ವೇದಾದಿಗಳನ್ನು ಅಧ್ಯಯನ ಮಾಡದೆ ಬ್ರಹ್ಮನ ಸ್ವರೂಪವನ್ನು ನಿರ್ಧಾರವಾಗಿ ಹೇಳಲಾಗದು. ಆದ ಕಾರಣ ಬ್ರಹ್ಮ ಅನಿರುಕ್ತ. ಜಗದಾಶ್ರಯತ್ವಾತ್ - ನಿಲಯನಂ, ಜಗತ್ತಿಗೆ ಆಶ್ರಯನಾದುದರಿಂದ ನಿಲಯನ. (ನಿಶ್ಚಿತಂ ಅಯಂತೇ ಅಸ್ಮಿನ್ ಇತಿ) ಸ್ವಾಶ್ರಯತ್ವಾತ್ ಅನಿಲಯನಂ - ತಾನೇ ತನಗೆ ಆಶ್ರಯ, ಬೇರೆ ಆಶ್ರಯವಿಲ್ಲ, ಹೀಗಾಗಿ ಅನಿಲಯನ. ದುರ್ಜ್ಞೇಯತ್ವಾತ್ - ಅವಿಜ್ಞಾನಮ್ - ತಿಳಿಯುವುದು ಅಸಾಧ್ಯವಾದುದರಿಂದ ಅವಿಜ್ಞಾನ. (ನ ವಿದ್ಯತೇ ವಿಜ್ಞಾನಂ ಯದ್ವಿಷಯೇ) ಸತತೇಃ - ಸಮ್ಯಗ್ ವ್ಯಾಪ್ತೇಃ, ಯಾತನಾತ್ - ಯತ್ನಂ ಪ್ರತಿ ಹೇತುತ್ವಾತ್ = ಸತ್ಯಂ. ಸತ್ = ವ್ಯಾಪ್ಯ, ಯ = ನಮ್ಮ ಯತ್ನಕ್ಕೆ ಕಾರಣ = ಸತ್ಯ. ದುರ್ಜನೈಃ ಅಪ್ರಾಪ್ಯತ್ವಾತ್ - ಅನೃತಂ - ದುರ್ಜನರಿಗೆ ಅಗಮ್ಯನಾದುದರಿಂದ ಅನೃತ ನಿತ್ಯತ್ವಾತ್ - ಸತ್ಯಂ. ನಿತ್ಯನಾದುದರಿಂದ ಸತ್ಯ. ನಿತ್ಯ ಸತ್ಯ ಶಬ್ದಗಳಿಗೆ ಸಮಾನವಾದ ಅರ್ಥವಿದೆ. ಸತ್ = ಸಾಧುಗುಣಾಃ, ತೇಷಾಂ ತ್ = ವ್ಯಾಪ್ತಿಃ, ತಸ್ಯಾಃ ಯ = ಯಂತೃತ್ವಾತ್. ಭಕ್ತರಲ್ಲಿ ಒಳ್ಳೆಯ ಗುಣಗಳನ್ನು ಹೆಚ್ಚು ಹೆಚ್ಚಾಗಿ ಬರುವಂತೆ ಮಾಡುವವನು - ಸತ್ಯ.

**ನನು ಉಕ್ತರೀತ್ಯಾ ಅವಸಾದನಾದಿನಿಮಿತ್ತೇನ ಸತ್ - ನಿರುಕ್ತ - ಅನಿಲಯನ ಅವಿಜ್ಞಾನ - ಅನೃತಶಬ್ದವಾಚ್ಯತ್ವೇ ಅವಸಾದನ - ಅಂತವತ್ವ - ಅಜ್ಞಾನಾದಿದೋಷತಾ ಸ್ಯಾತ್ ಇತ್ಯತ ಆಹ - ಯದಿದಂ ಕಿಂಚೇತಿ ॥ ಯದಿದಂ ಕಿಂಚ ಸನ್ನಿರುಕ್ತಾದಿ ಶಬ್ದಾರ್ಥತ್ವಮುಕ್ತಂ ತತ್ ಸರ್ವಂ, ಸತ್ಯಂ = ಸಾಧ್ವೇವ ಇತ್ಯಾಚಕ್ಷತೇ ವೃದ್ಧಾಃ ಇತ್ಯರ್ಥಃ । ತದಧೀನತ್ವಾದಿತಿ ನ್ಯಾಯೇನ, ಅನ್ಯಗತ ಅವಸಾದನಾದಿಕಂ ಪ್ರತಿ ಸ್ವಾತಂತ್ರ್ಯ ಹೇತುನಾ ತಚ್ಛಬ್ದವಾಚ್ಯತ್ವೋಕ್ತೌ ದೋಷಾಭಾವಾತ್ ಇತಿ ಭಾವಃ ॥ ೧೪ ॥**

ಹಿಂದೆ ಹೇಳಿದಂತೆ, ನಾಶ ಮಾಡುವ ಕಾರಣ 'ಸತ್', ನಾಶವಾಗುವುದರಿಂದ ಅನೃತ, ಅಜ್ಞಾನವಿರುವುದರಿಂದ ಅವಿಜ್ಞಾನ. ಹೀಗೆ ಇಂತಹ ಶಬ್ದಗಳಿಂದ ಬ್ರಹ್ಮನು ವಾಚ್ಯನಾದರೆ ಅವನಲ್ಲಿ ಕೊಲ್ಲುವುದು, ನಾಶವಾಗುವುದು, ಅಜ್ಞಾನ ಮುಂತಾದ ದೋಷಗಳು ಬರಲಾರವೆ? ಅದಕ್ಕೆ ಉತ್ತರ - 'ಯದಿದಂ ಕಿಂಚ' ಎಂದು ಮುಂತಾಗಿ.

ಯದಿದಂ ಕಿಂಚ = ಹಿಂದೆ ಸತ್, ನಿರುಕ್ತ ಮುಂತಾದ ಪದಗಳಿಂದ ಬ್ರಹ್ಮನು ವಾಚ್ಯನಾಗಿದ್ದಾನೆ ಎಂದು ಹೇಳಲಾಯಿತೋ (ಸಚ್ಚ ತ್ಯಚ್ಚಾಭವತ್) ಅವೆಲ್ಲವೂ, ಸತ್ಯಂ = ಸರಿಯೆಂದು ಜ್ಞಾನಿಗಳು ಅನುಮೋದಿಸುತ್ತಾರೆ, ಎಂದು ಅರ್ಥ.

ಬ್ರಹ್ಮಸೂತ್ರದಲ್ಲಿ "ತದಧೀನತ್ವಾದರ್ಥವತ್ (೧-೪-೩)" ಎಂಬ ಸೂತ್ರದಲ್ಲಿ ಹೇಳಿದಂತೆ, ಮತ್ತೊಬ್ಬರಲ್ಲಿ ಇರುವ ನಾಶ, ಅನಿತ್ಯತ್ವ ಮುಂತಾದ ದೌರ್ಬಲ್ಯಗಳಿಗೆ ಬ್ರಹ್ಮನು ನಿಯಾಮಕನಾಗಿ ಅವುಗಳ ಮೇಲೆ ಅವನಿಗೆ ಸ್ವಾತಂತ್ರ್ಯವಿರುವ ಕಾರಣ ಬ್ರಹ್ಮನು ಆ ಶಬ್ದಗಳಿಂದ ವಾಚ್ಯನಾಗಿದ್ದಾನೆ, ಹೊರತು ಅವನಲ್ಲೇ ಅಂತಹ ದೌರ್ಬಲ್ಯಗಳಿರುವ ಕಾರಣದಿಂದಲ್ಲ. ಹೀಗಾದಾಗ ಬ್ರಹ್ಮನಿಗೇನೂ ದೋಷದ ಪ್ರಸಂಗವಿಲ್ಲ. ॥ ೧೪ ॥

**'ಬಹುಃ ಸ್ಯಾಂ' ಇತಿ ಆತ್ಮನಃ ಬಹುರೂಪಾತ್ಮನಾ ಭವನಂ ಉಕ್ತ್ವಾ, ಪ್ರದ್ಯುಮ್ನ ರೂಪೇಣ ಜಗತ್‌ಸೃಷ್ಟಿಂ ಉಕ್ತ್ವಾ, ಸೃಷ್ಟಸ್ಯ ಸತ್ತಾ-ಶಕ್ತ್ಯಾದಿ ಪ್ರೇರಣಾಯ ರೂಪಾಂತರೇಣ ಪ್ರವೇಶಂ ಚೋಕ್ತ್ವಾ ಇದಾನೀಂ ಬಹುರೂಪ-ಭವನಂ ಶ್ಲೋಕೋಕ್ತ್ಯಾ ವ್ಯನಕ್ತಿ - ತದಪ್ಯೇಷ ಇತಿ ॥**

ಹಿಂದೆ 'ಬಹುಃ ಸ್ಯಾಂ' ಎಂದು ಬ್ರಹ್ಮನು ಬಹುರೂಪವನ್ನು ಸ್ವೀಕರಿಸಿದ ಎನ್ನಲಾಯಿತು. ಅನಂತರ "ಇದಂ ಸರ್ವಂ ಅಸೃಜತ" ಎಂದು ಪ್ರದ್ಯುಮ್ನ ರೂಪದಿಂದ ಜಗತ್ತಿನ ಸೃಷ್ಟಿಯನ್ನು ಹೇಳಲಾಯಿತು. ಸೃಷ್ಟಿ ಮಾಡಿದ ಜಗತ್ತಿಗೆ ಸ್ಥಿತಿ, ಶಕ್ತಿಗಳ ಸಿದ್ಧಿಗಾಗಿ ಅನೇಕ ರೂಪಗಳಿಂದ ಅವುಗಳೊಳಗೆ ಪ್ರವೇಶವನ್ನೂ "ಸಚ್ಚ ತ್ಯಚ್ಚಾಭವತ್" ಎಂದು ಹೇಳಲಾಯಿತು. ಮುಂದೆ ಬ್ರಹ್ಮನು ಅನೇಕರೂಪಗಳನ್ನು ಸ್ವೀಕರಿಸಿದ್ದನ್ನು ಶ್ಲೋಕರೂಪದಲ್ಲಿ ನಿರೂಪಿಸುತ್ತಿದ್ದಾರೆ.

**ತದಪ್ಯೇಷ ಶ್ಲೋಕೋ ಭವತಿ ।**

**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ ।**
**ತದಾತ್ಮಾನಂ ಸ್ವಯಮಕುರುತ । ತಸ್ಮಾತ್ ತತ್ ಸುಕೃತ-**
**ಮುಚ್ಯತ ಇತಿ ।**

ಬ್ರಹ್ಮನು ಬಹುರೂಪನಾದನು ಎನ್ನುವ ಬಗ್ಗೆ ಹೀಗೆ ಶ್ಲೋಕವಿದೆ- (ಅದರ ಅರ್ಥ) ಈ ಜಗತ್ತಿನ ಸೃಷ್ಟಿಗಿಂತ ಮೊದಲು ಮೂಲರೂಪದ ನಾರಾಯಣನೊಬ್ಬನೇ ಇದ್ದನು. ಆ ನಾರಾಯಣರೂಪದಿಂದ ವಾಸುದೇವನು ಆವಿರ್ಭವಿಸಿದನು. ವಾಸುದೇವನು ಸಂಕರ್ಷಣ ಪ್ರದ್ಯುಮ್ನಾದಿ ರೂಪದಿಂದ ತನ್ನನ್ನು ಸೃಷ್ಟಿಮಾಡಿಕೊಂಡನು. ಹೀಗೆ ತನ್ನನ್ನು ರೂಪಾಂತರ ಮಾಡಿಕೊಂಡ ಕಾರಣದಿಂದ ವಾಸುದೇವ ರೂಪಕ್ಕೆ 'ಸುಕೃತ' ಎಂದು ಹೆಸರು.

**ತತ್ = ಸ್ವರೂಪ ಬಹುಭವನರೂಪೇ ಅರ್ಥೇऽಪಿ ಇತ್ಯರ್ಥಃ । ಇದಮಗ್ರೇ = ಅಸ್ಯ ಜಗತಃ ಅಗ್ರೇ = ಪೂರ್ವಂ । ಅಸತ್ - ನಞಪೂರ್ವಸ್ಯ ಗತ್ಯರ್ಥಸ್ಯ ಸೀದತೇಃ ರೂಪಮ್, ತಥಾ ಚ ಅನಾಸಾದ್ಯತ್ವರೂಪ - ಅಪ್ರಾಪ್ಯತ್ವ ಹೇತುನಾ ಅಸನ್ನಾಮಾ ನಾರಾಯಣಃ ಮೂಲರೂಪೀ ಆಸೀತ್, ವೈ = ಪ್ರಸಿದ್ಧಮ್ । ತತೋ = ನಾರಾಯಣಾತ್, ಮುಮುಕ್ಷುಣಾ ಆಸಾದ್ಯತ್ವರೂಪ - ಪ್ರಾಪ್ಯತ್ವ ಹೇತುನಾ ಸನ್ನಾಮಾ ವಾಸುದೇವಃ, ಅಜಾಯತ = ಪ್ರಾದುರಭವತ್ । ತತ್ = ವಾಸುದೇವಾಖ್ಯಂ ರೂಪಂ, ಆತ್ಮಾನಂ = ಸ್ವಯಂ ಸಂಕರ್ಷಣ - ಪ್ರದ್ಯುಮ್ನಾದಿರೂಪೇಣ ಅಕುರುತ । ತಸ್ಮಾತ್ = ಸ್ವಾತ್ಮಾನಂ ರೂಪಾಂತರಾತ್ಮತ್ವೇನ ಅಕುರುತ ಇತಿ ಹೇತೋಃ, ತತ್ = ವಾಸುದೇವಾಖ್ಯಂ ರೂಪಂ, ಸುಕೃತಂ ಉಚ್ಯತೇ ಇತ್ಯರ್ಥಃ । ಇತಿ ಶಬ್ದಸ್ಯ ಇತ್ಯೇಷ ಶ್ಲೋಕ ಇತ್ಯನ್ವಯಃ ।**

'ತದ್ಯಪ್ಯೇಷಃ' ಎಂಬ ಉಪನಿಷತ್ತಿನಲ್ಲಿ ತತ್ ಎಂದರೆ ''ಭಗವಂತನು ಅನೇಕ ರೂಪಗಳನ್ನು ತಾಳುತ್ತಾನೆ'' ಎಂಬ ವಿಷಯದಲ್ಲೂ ಕೂಡಾ ಎಂದು ಅರ್ಥ.

ಇದಮಗ್ರೇ, ಎಂದರೆ ಈ ಜಗತ್ತಿನ ಸೃಷ್ಟಿಯಾಗುವ ಮೊದಲು ಎಂದು ಅರ್ಥ. ಅಸತ್ ಎಂದು ನಾರಾಯಣನ ಹೆಸರು. ''ಚಲನೆ'' ಎಂಬ ಅರ್ಥದ ಸದ್ ಧಾತುವಿನಿಂದ 'ಸತ್' ಎಂಬ ರೂಪವಾಗುತ್ತದೆ. ಗಮ್ಯನಾದವನು ಸತ್. ನ ಸತ್-ಅಸತ್. ಅಗಮ್ಯನಾದವನು ಅಸತ್. ಮೂಲರೂಪದ ನಾರಾಯಣನು ಅಗಮ್ಯನಾದುದರಿಂದ ಅವನಿಗೆ ಅಸತ್ ಎಂಬ ಹೆಸರಿದೆ. ಅಂತಹ ನಾರಾಯಣನು ಒಬ್ಬನೇ ಇದ್ದನು. ವೈ ಎಂಬ ಶಬ್ದವು ಈ ವಿಷಯವು ಪ್ರಮಾಣ ಪ್ರಸಿದ್ಧವಾದುದು ಎಂದು ತಿಳಿಸುತ್ತದೆ.

ತತಃ = ಆ ನಾರಾಯಣನಿಂದ ವಾಸುದೇವನು ಆವಿರ್ಭವಿಸಿದನು. ಸತ್ ಎಂದರೆ ಗಮ್ಯ. ಮೋಕ್ಷಯೋಗ್ಯ ಜೀವರು ವಾಸುದೇವನ ಬಳಿಗೆ ಹೋಗುತ್ತಾರೆ. ಹೀಗೆ ಮುಮುಕ್ಷುಗಮ್ಯನಾದುದರಿಂದ ವಾಸುದೇವನು 'ಸತ್' ಎನಿಸಿದ್ದಾನೆ.

ತತ್ = ಆ ವಾಸುದೇವನು, ಆತ್ಮಾನಂ = ತನ್ನನ್ನು, ಸಂಕರ್ಷಣ, ಪ್ರದ್ಯುಮ್ನಾದಿ ರೂಪದಿಂದ ಸೃಷ್ಟಿಮಾಡಿಕೊಂಡನು. ತಸ್ಮಾತ್ = ತನ್ನನ್ನು ಅನೇಕರೂಪನನ್ನಾಗಿ ಮಾಡಿಕೊಳ್ಳುವ ಕಾರಣದಿಂದಾಗಿ, ತತ್ = ವಾಸುದೇವ ರೂಪವು, ಸುಕೃತ ಎಂದು ಕರೆಸಿಕೊಳ್ಳುತ್ತದೆ.

ಕೊನೆಯಲ್ಲಿರುವ ಇತಿ ಶಬ್ದವನ್ನು ಪ್ರಾರಂಭದ ಶ್ಲೋಕಶಬ್ದದೊಂದಿಗೆ ಅನ್ವಯಿಸಿಕೊಳ್ಳಬೇಕು. 'ಇತಿ ಶ್ಲೋಕಃ ಭವತಿ' ಎಂದಾಗುತ್ತದೆ. ಹೀಗೆ ಶ್ಲೋಕವಿದೆ, ಎಂದು ಅರ್ಥ.

**ಸನ್ನಾಮ್ನಃ ಮುಮುಕ್ಷುಸಾಧ್ಯತ್ವಂ ಹೇತೂಕ್ತ್ಯಾ ವ್ಯನಕ್ತಿ- "ಯದ್ವೈತತ್ ಸುಕೃತಮ್, ರಸೋ ವೈ ಸಃ" ಇತಿ ।**

ಸತ್ ಎಂಬ ಹೆಸರಿನ ವಾಸುದೇವನು ಮುಮುಕ್ಷುಗಳಿಂದ ಗಮ್ಯನಾಗಿದ್ದಾನೆ ಎನ್ನುವುದನ್ನು ಸಕಾರಣವಾಗಿ ಮುಂದಿರುವ 'ಯ ದ್ವೈ ತತ್ ಸುಕೃತಂ" ಎಂಬ ವಾಕ್ಯದಲ್ಲಿ ಹೇಳಲಾಗಿದೆ.

**ಯದ್ ವೈ ತತ್ ಸುಕೃತಮ್ । ರಸೋ ವೈ ಸಃ । ರಸꣳಹ್ಯೇವಾಯಂ ಲಬ್ಧ್ವಾಽನಂದೀಭವತಿ । ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾ-ನಂದಯಾತಿ ॥ ೧೫ ॥**

'ಸುಕೃತ' ಎನಿಸಿರುವ ಈ ವಾಸುದೇವನು ಆನಂದರೂಪನಾಗಿದ್ದಾನೆ. ಜ್ಞಾನಿಯಾದವನು ಆನಂದರೂಪನಾದ ಈ ವಾಸುದೇವನನ್ನು ಹೊಂದಿ ತಾನೂ ಆನಂದಭರಿತನಾಗುತ್ತಾನೆ.

ಬ್ರಹ್ಮನು ಬಹುರೂಪನಾದನು ಎನ್ನುವ ಬಗ್ಗೆ ಹೀಗೆ ಶ್ಲೋಕವಿದೆ- (ಅದರ ಅರ್ಥ) ಈ ಜಗತ್ತಿನ ಸೃಷ್ಟಿಗಿಂತ ಮೊದಲು ಮೂಲರೂಪದ ನಾರಾಯಣನೊಬ್ಬನೇ ಇದ್ದನು. ಆ ನಾರಾಯಣರೂಪದಿಂದ ವಾಸುದೇವನು ಆವಿರ್ಭವಿಸಿದನು. ವಾಸುದೇವನು ಸಂಕರ್ಷಣ ಪ್ರದ್ಯುಮ್ನಾದಿ ರೂಪದಿಂದ ತನ್ನನ್ನು ಸೃಷ್ಟಿಮಾಡಿಕೊಂಡನು. ಹೀಗೆ ತನ್ನನ್ನು ರೂಪಾಂತರ ಮಾಡಿಕೊಂಡ ಕಾರಣದಿಂದ ವಾಸುದೇವ ರೂಪಕ್ಕೆ 'ಸುಕೃತ' ಎಂದು ಹೆಸರು.

**ತತ್ = ಸ್ವರೂಪ ಬಹುಭವನರೂಪೇ ಅರ್ಥೇಽಪಿ ಇತ್ಯರ್ಥಃ । ಇದಮಗ್ರೇ = ಅಸ್ಯ ಜಗತಃ ಅಗ್ರೇ = ಪೂರ್ವಂ । ಅಸತ್ - ನಞಪೂರ್ವಸ್ಯ ಗತ್ಯರ್ಥಸ್ಯ ಸೀದತೇಃ ರೂಪಮ್, ತಥಾ ಚ ಅನಾಸಾದ್ಯತ್ವರೂಪ - ಅಪ್ರಾಪ್ಯತ್ವ ಹೇತುನಾ ಅಸನ್ನಾಮಾ ನಾರಾಯಣಃ ಮೂಲರೂಪೀ ಆಸೀತ್, ವೈ = ಪ್ರಸಿದ್ಧಮ್ । ತತೋ = ನಾರಾಯಣಾತ್, ಮುಮುಕ್ಷುಣಾ ಆಸಾದ್ಯತ್ವರೂಪ - ಪ್ರಾಪ್ಯತ್ವ ಹೇತುನಾ ಸನ್ನಾಮಾ ವಾಸುದೇವಃ, ಅಜಾಯತ = ಪ್ರಾದುರಭವತ್ । ತತ್ = ವಾಸುದೇವಾಖ್ಯಂ ರೂಪಂ, ಆತ್ಮಾನಂ = ಸ್ವಯಂ ಸಂಕರ್ಷಣ - ಪ್ರದ್ಯುಮ್ನಾದಿರೂಪೇಣ ಅಕುರುತ । ತಸ್ಮಾತ್ = ಸ್ವಾತ್ಮಾನಂ ರೂಪಾಂತರಾತ್ಮತ್ವೇನ ಅಕುರುತ ಇತಿ ಹೇತೋಃ, ತತ್ = ವಾಸುದೇವಾಖ್ಯಂ ರೂಪಂ, ಸುಕೃತಂ ಉಚ್ಯತೇ ಇತ್ಯರ್ಥಃ । ಇತಿ ಶಬ್ದಸ್ಯ ಇತ್ಯೇಷ ಶ್ಲೋಕ ಇತ್ಯನ್ವಯಃ ।**

'ತದ್ಯಪ್ಯೇಷಃ' ಎಂಬ ಉಪನಿಷತ್ತಿನಲ್ಲಿ ತತ್ ಎಂದರೆ ''ಭಗವಂತನು ಅನೇಕ ರೂಪಗಳನ್ನು ತಾಳುತ್ತಾನೆ'' ಎಂಬ ವಿಷಯದಲ್ಲೂ ಕೂಡಾ ಎಂದು ಅರ್ಥ.

ಇದಮಗ್ರೇ, ಎಂದರೆ ಈ ಜಗತ್ತಿನ ಸೃಷ್ಟಿಯಾಗುವ ಮೊದಲು ಎಂದು ಅರ್ಥ. ಅಸತ್ ಎಂದು ನಾರಾಯಣನ ಹೆಸರು. ''ಚಲನೆ'' ಎಂಬ ಅರ್ಥದ ಸದ್ ಧಾತುವಿನಿಂದ 'ಸತ್' ಎಂಬ ರೂಪವಾಗುತ್ತದೆ. ಗಮ್ಯನಾದವನು ಸತ್. ನ ಸತ್-ಅಸತ್. ಅಗಮ್ಯನಾದವನು ಅಸತ್. ಮೂಲರೂಪದ ನಾರಾಯಣನು ಅಗಮ್ಯನಾದುದರಿಂದ ಅವನಿಗೆ ಅಸತ್ ಎಂಬ ಹೆಸರಿದೆ. ಅಂತಹ ನಾರಾಯಣನು ಒಬ್ಬನೇ ಇದ್ದನು. ವೈ ಎಂಬ ಶಬ್ದವು ಈ ವಿಷಯವು ಪ್ರಮಾಣ ಪ್ರಸಿದ್ಧವಾದುದು ಎಂದು ತಿಳಿಸುತ್ತದೆ.

ತತಃ = ಆ ನಾರಾಯಣನಿಂದ ವಾಸುದೇವನು ಆವಿರ್ಭವಿಸಿದನು. ಸತ್ ಎಂದರೆ ಗಮ್ಯ. ಮೋಕ್ಷಯೋಗ್ಯ ಜೀವರು ವಾಸುದೇವನ ಬಳಿಗೆ ಹೋಗುತ್ತಾರೆ. ಹೀಗೆ ಮುಮುಕ್ಷುಗಮ್ಯನಾದುದರಿಂದ ವಾಸುದೇವನು 'ಸತ್' ಎನಿಸಿದ್ದಾನೆ.

ತತ್ = ಆ ವಾಸುದೇವನು, ಆತ್ಮಾನಂ = ತನ್ನನ್ನು, ಸಂಕರ್ಷಣ, ಪ್ರದ್ಯುಮ್ನಾದಿ ರೂಪದಿಂದ ಸೃಷ್ಟಿಮಾಡಿಕೊಂಡನು. ತಸ್ಮಾತ್ = ತನ್ನನ್ನು ಅನೇಕರೂಪನನ್ನಾಗಿ ಮಾಡಿಕೊಳ್ಳುವ ಕಾರಣದಿಂದಾಗಿ, ತತ್ = ವಾಸುದೇವ ರೂಪವು, ಸುಕೃತ ಎಂದು ಕರೆಸಿಕೊಳ್ಳುತ್ತದೆ.

ಕೊನೆಯಲ್ಲಿರುವ ಇತಿ ಶಬ್ದವನ್ನು ಪ್ರಾರಂಭದ ಶ್ಲೋಕಶಬ್ದದೊಂದಿಗೆ ಅನ್ವಯಿಸಿಕೊಳ್ಳಬೇಕು. 'ಇತಿ ಶ್ಲೋಕಃ ಭವತಿ' ಎಂದಾಗುತ್ತದೆ. ಹೀಗೆ ಶ್ಲೋಕವಿದೆ, ಎಂದು ಅರ್ಥ.

**ಸನ್ನಾಮ್ನಃ ಮುಮುಕ್ಷುಸಾಧ್ಯತ್ವಂ ಹೇತೂಕ್ತ್ಯಾ ವ್ಯನಕ್ತಿ- ''ಯದ್ವೈತತ್ ಸುಕೃತಮ್, ರಸೋ ವೈ ಸಃ'' ಇತಿ ।**

ಸತ್ ಎಂಬ ಹೆಸರಿನ ವಾಸುದೇವನು ಮುಮುಕ್ಷುಗಳಿಂದ ಗಮ್ಯನಾಗಿದ್ದಾನೆ ಎನ್ನುವುದನ್ನು ಸಕಾರಣವಾಗಿ ಮುಂದಿರುವ 'ಯ ದ್ವೈ ತತ್ ಸುಕೃತಂ'' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

**ಯದ್ ವೈ ತತ್ ಸುಕೃತಮ್ । ರಸೋ ವೈ ಸಃ । ರಸꣳಹ್ಯೇವಾಯಂ ಲಬ್ಧ್ವಾನಂದೀಭವತಿ । ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಶ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವಾ-ನಂದಯಾತಿ ॥ ೧೫ ॥**

'ಸುಕೃತ' ಎನಿಸಿರುವ ಈ ವಾಸುದೇವನು ಆನಂದರೂಪನಾಗಿದ್ದಾನೆ. ಜ್ಞಾನಿಯಾದವನು ಆನಂದರೂಪನಾದ ಈ ವಾಸುದೇವನನ್ನು ಹೊಂದಿ ತಾನೂ ಆನಂದಭರಿತನಾಗುತ್ತಾನೆ.

ಈ ಆಕಾಶನಾಮಕನಾದ ಪರಮಾತ್ಮನು ಆನಂದರೂಪನಾಗದಿರುತ್ತಿದ್ದರೆ ಈ ಜಗತ್ತನ್ನು ಇನ್ನಾರು ಪ್ರೇರಿಸಿ ನಡೆಸಬೇಕು? ಅಷ್ಟೇ ಅಲ್ಲ, ಮತ್ತೊಬ್ಬರಿಗೆ ಆನಂದವನ್ನು ನೀಡುತ್ತಾನೆ, ಈ ಭಗವಂತ. ಆದ್ದರಿಂದಲೂ ಅವನು ಆನಂದರೂಪನಾಗಿದ್ದಾನೆ.

**ಯದೇತತ್ ಸುಕೃತಂ ಸಃ ವಾಸುದೇವಃ, ರಸೋ ವೈ = ಆನಂದರೂಪೋ ವೈ । ಹಿ ಹೇತೌ । ತತ ಏವ, ಆಯಂ = ಜ್ಞಾನ್ಯೇವ, ರಸಮೇವೇತಿ ವಾ ಲಬ್ಧ್ವಾ ಆನಂದೀಭವತಿ, ನಾನ್ಯಥೇತ್ಯರ್ಥಃ ।**

**ತಾವತಾ ಕಥಂ ಆನಂದರೂಪತ್ವಮ್? ಇತ್ಯತಃ ಜಗಚ್ಚೇಷ್ಟಕತ್ವಯುಕ್ತ್ಯಾ ಸಾಧಯತಿ - ಕೋ ಹೀತಿ ॥ ಯತ್ = ಯದಿ, ಏಷಃ ಆಕಾಶಃ = ಆದೀಪ್ತತ್ವ ಹೇತುನಾ ಆಕಾಶನಾಮಾ ಭಗವಾನ್, ಆನಂದೋ ನ ಸ್ಯಾತ್ = ಸುಖರೂಪೋ ನ ಸ್ಯಾತ್ ತರ್ಹಿ ಜಗತ್ ನ ಚೇಷ್ಟಯೇತ್ ಇತಿ ಶೇಷಃ । ಚೇಷ್ಟಾರೂಪ ಪ್ರವೃತ್ತಿ ಹೇತೂನಾಂ ರಾಗ-ದ್ವೇಷ ದುಃಖೋದ್ರೇಕ - ಸುಖೋದ್ರೇಕ ರೂಪಾಣಾಂ ಚತುರ್ಣಾಂ ಮಧ್ಯೇ "ನಿರನಿಷ್ಟೋ ನಿರವದ್ಯಃ" ಇತ್ಯಾದಿ ಶ್ರುತ್ಯಾ ಆದ್ಯತ್ರಯಸ್ಯ ಅಭಾವನಿಶ್ಚಯೇನ ಸುಖೋದ್ರೇಕಸ್ಯಾಪಿ ಅಭಾವೇ ಜಗತ್-ಪ್ರವೃತ್ತಿಃ ನಿರ್ಹೇತುಕಾ ನೋತ್ಪದ್ಯೇತ । ಉತ್ಪದ್ಯತೇ ಚ । ಅತೋ ಭವತಿ ಜಗತ್ ಪ್ರವರ್ತಕಃ ಆನಂದರೂಪಃ ಇತಿ ।**

'ಸುಕೃತ' ಎನಿಸಿರುವ ಈ ವಾಸುದೇವನು ರಸೋ ವೈ = ಆನಂದರೂಪನಾಗಿದ್ದಾನೆ. ಇದು ಪ್ರಸಿದ್ಧವು. ಹಿ ಶಬ್ದವು 'ಈ ಕಾರಣದಿಂದ' ಎಂಬ ಅರ್ಥವನ್ನು ತಿಳಿಸುತ್ತದೆ. ವಾಸುದೇವನು ಆನಂದರೂಪನಾಗಿರುವ ಕಾರಣದಿಂದಲೇ (ಹಿ) ಜ್ಞಾನಿಯು ಮಾತ್ರ ಈ ವಾಸುದೇವನನ್ನು ತಲುಪಿ ತಾನೂ ಆನಂದವನ್ನು ಅನುಭವಿಸುತ್ತಾನೆ. ವಾಸುದೇವನ ಸಾಮೀಪ್ಯದ ಹೊರತಾಗಿ ಜ್ಞಾನಿಗೆ ಆನಂದವಿಲ್ಲ.

ವಾಸುದೇವನಿಗೆ ಆನಂದರೂಪತ್ವವನ್ನು ಜಗನ್ನಿಯಾಮಕತ್ವರೂಪ ಕಾರಣವನ್ನು ಕೊಟ್ಟು ಸಮರ್ಥಿಸಲು 'ಕೋ ಹ್ಯೇವಾನ್ಯಾತ್' ಎಂಬ ಮುಂದಿನ ವಾಕ್ಯವಿದೆ. ಯತ್ ಎಂದರೆ ಒಂದು ವೇಳೆ, ಏಷಃ ಆಕಾಶಃ = ಈ ಭಗವಂತನು. ಭಗವಂತನು ಪ್ರಕಾಶಮಯನಾದ ಕಾರಣದಿಂದ ಅವನಿಗೆ 'ಆಕಾಶ' (ಆ = ಸಮ್ಯಕ್, ಕಾಶತೇ = ಪ್ರಕಾಶತೇ) ಎಂದು ಹೆಸರು. ಆಕಾಶನಾಮಕನಾದ ಈ ಪರಮಾತ್ಮನು

ಆನಂದಮಯನಾಗಿರದಿರುತ್ತಿದ್ದರೆ ಈ ಜಗತ್ತನ್ನು ಪ್ರೇರಿಸುತ್ತಿರಲಿಲ್ಲ. ''ತರ್ಹಿ ಜಗತ್ ನ ಚೇಷ್ಟಯೇತ್'' ಎಂಬ ಅಂಶ ಉಪನಿಷತ್ತಿನಲ್ಲಿ ಇಲ್ಲ, ಅದನ್ನು ಸೇರಿಸಿಕೊಳ್ಳಬೇಕು.

ಮತ್ತೊಬ್ಬರಿಗೆ ಪ್ರೇರಣೆ ನೀಡಿ ಕ್ರಿಯಾಶೀಲರನ್ನಾಗಿಸಬೇಕಾದರೆ ಆಸೆ, ದ್ವೇಷ, ತಡೆಯಲಾರದ ದುಃಖ, ಸುಖಾತಿಶಯ ಇವುಗಳು ಕಾರಣ. ಈ ನಾಲ್ಕರಲ್ಲಿ ಮೊದಲ ಮೂರು ಪರಮಾತ್ಮನಲ್ಲಿ ಇಲ್ಲ. 'ನಿರನಿಷ್ಟಃ ನಿರವದ್ಯಃ' ಎಂಬ ಶ್ರುತಿವಾಕ್ಯವು ಪರಮಾತ್ಮನಲ್ಲಿ ದುಃಖವಿಲ್ಲ, ದೋಷಗಳೂ ಇಲ್ಲ ಎಂದು ತಿಳಿಸಿದೆ. ಹೀಗಾಗಿ ಕೊನೆಯದಾದ ಸುಖೋದ್ರೇಕವೇ ಅವನು ಪ್ರೇರಣೆ ಕೊಡಲು ಕಾರಣ ಎನ್ನುವುದು ಅನಿವಾರ್ಯ. ಅದೂ ಅವನಲ್ಲಿ ಇಲ್ಲದಿದ್ದರೆ ಜಗತ್ತು ಕ್ರಿಯಾಶೀಲವೇ ಆಗುತ್ತಿರಲಿಲ್ಲ. ಜಗತ್ತು ಕ್ರಿಯಾಶೀಲವಾಗಿದೆ. ಆದ್ದರಿಂದ ಅದನ್ನು ಕ್ರಿಯಾಶೀಲವಾಗಿಸುವ ಪರಮಾತ್ಮ ಆನಂದರೂಪನಾಗಿದ್ದಾನೆ.

**ಮಾಸ್ತು ಅಯಂ ಜಗತ್ ಪ್ರವರ್ತಕಃ ಇತ್ಯತ ಆಹ - ಕೋ ಹೀ ತಿ ॥ ಅಯಂ ಚೇತ್ ನ ಚೇಷ್ಟಯೇತ್ ತರ್ಹಿ ಇತಿ ಶೇಷಃ । ಕೋ ಹಿ ಏವ ಅನ್ಯಾತ್, ಅನ ಚೇಷ್ಟಾಯಾಂ, ಚೇಷ್ಟಯೇತ್? ಕಃ ಪ್ರಾಣ್ಯಾತ್; ಪ್ರಕೃಷ್ಟಚೇಷ್ಟಾಂ = ಯಜ್ಞದಾನಾದಿ ಪ್ರೇರಣಾಂ ಕುರ್ಯಾತ್ ? ನ ಕೋಽಪಿ । ಅತೋ ಜಗತ್ ನಿಶ್ಚೇಷ್ಟಂ ಆಪದ್ಯೇತ ಇತಿ । ಕಾರ್ಯಾನುಸಾರಾತ್ ಕಾರಣಸ್ಯ ಮಹಾಪ್ರವೃತ್ಯಾ ಮಹಾನಂದರೂಪೋಽಯಂ ಇತಿ ಭಾವಃ ।**

**ಪರೇಷಾಂ ಸುಖಹೇತುತ್ವಾಚ್ಚ ಅಯಂ ಸುಖೋದ್ರಿಕ್ತಃ ಇತ್ಯಾಹ - ಏಷ ಹ್ಯೇವಾನಂದಯಾತೀತಿ ॥ ಅಖಿಲಂ ಆನಂದಯತಿ, ಹಿ = ಯತಃ ಅತಶ್ಚ ಆನಂದರೂಪಃ ಇತಿ ॥ ೧೫ ॥**

ಪರಮಾತ್ಮನು ಜಗತ್ತನ್ನು ಕ್ರಿಯಾಶೀಲವನ್ನಾಗಿ ಮಾಡಿಸುವುದೇ ಬೇಡ, ಏನು ತೊಂದರೆ ? ಅದಕ್ಕೆ ''ಕೋ ಹಿ ಏವ'' ಎಂಬ ಉಪನಿಷತ್ತು ಉತ್ತರ ಹೇಳುತ್ತದೆ. ಅಯಂ ಚೇತ್ ನ ಚೇಷ್ಟಯೇತ್ ತರ್ಹಿ = ಈ ಪರಮಾತ್ಮನು ಜಗತ್ತನ್ನು ಕ್ರಿಯಾಶೀಲಗೊಳಿಸದಿದ್ದರೆ, ಇಷ್ಟು ಅಂಶವನ್ನು ಸೇರಿಸಿಕೊಳ್ಳಬೇಕು. ಪರಮಾತ್ಮ ಜಗತ್ತನ್ನು ಪ್ರೇರಿಸದಿದ್ದರೆ ಇನ್ನಾರು ಪ್ರೇರಿಸಬೇಕು, ಎಂದು ಒಟ್ಟು ಅರ್ಥ. 'ಅನ್ಯಾತ್' ಎಂಬ ಕ್ರಿಯಾಪದ ಚೇಷ್ಟಾರ್ಥಕವಾದ 'ಅನ' ಧಾತುವಿನ ರೂಪ. ಕಃ ಪ್ರಾಣ್ಯಾತ್ = ಯಜ್ಞ-ದಾನಾದಿಗಳಿಗೆ ಸಾತ್ವಿಕ ಪ್ರೇರಣೆಯನ್ನು ಯಾರು ನೀಡಿಯಾರು? ಯಾರೂ ನೀಡಲಾರರು. ಅದರಿಂದ ಜಗತ್ತು ನಿಷ್ಕ್ರಿಯವಾದೀತು.

ಕಾರ್ಯಕ್ಕೆ ಅನುಗುಣವಾಗಿ ಕಾರಣವಿರಬೇಕು. (ಚಿಕ್ಕ ಬಟ್ಟೆಗೆ ಸ್ವಲ್ಪ ನೂಲು ಸಾಕು. ದೊಡ್ಡ ಬಟ್ಟೆಗೆ ಹೆಚ್ಚು ನೂಲು ಬೇಕು) ಈ ವಿಶಾಲ ಜಗತ್ತಿನ ಚಲನೆ ನಡೆಯಬೇಕಾದರೆ ಅದಕ್ಕೆ ಕಾರಣವಾದ ಪರಮಾತ್ಮನ ಆನಂದವೂ ಅಪರಿಮಿತವೇ ಆಗಬೇಕು, ಎಂದು ಭಾವ.

ಮತ್ತೊಬ್ಬರ ಸುಖಕ್ಕೆ ಕಾರಣವಾದುದರಿಂದಲೂ ಪರಮಾತ್ಮನು ಸುಖಪೂರ್ಣ ಎಂದು ಇನ್ನೊಂದು ಕಾರಣವನ್ನು ''ಏಷ ಹ್ಯೇವ'' ಎಂಬ ಉಪನಿಷದ್ವಾಕ್ಯ ಕೊಡುತ್ತಿದೆ. ಎಲ್ಲರಿಗೂ ಆನಂದ ನೀಡುವ ಕಾರಣದಿಂದಾಗಿಯೂ ಪರಮಾತ್ಮನು ಆನಂದರೂಪನಾಗಿದ್ದಾನೆ.॥ ೧೫ ॥

**ಜ್ಞಾನ್ಯೇವ ಮುಚ್ಯತೇ, ನ ತು ಅಜ್ಞಃ ಇತಿ ಉಪಸಂಹರನ್ ಪ್ರತಿಷ್ಠಿತಮೇವ ಜ್ಞಾನಂ ಮುಕ್ತಿಹೇತುಃ ಇತ್ಯಾಹ - ಯದಾ ಹ್ಯೇ ವೈಷ ಇತಿ ॥**

ಜ್ಞಾನಿಗೆ ಮಾತ್ರವೇ ಮೋಕ್ಷ; ಅಜ್ಞಾನಿಗಳಿಗೆ ಇಲ್ಲ. ಇದು ಅಂತಿಮ ಉಪಸಂಹಾರ. ಅದಕ್ಕೆ ಪೂರಕವಾಗಿ ಮುಂದಿನ ಮಂತ್ರದಲ್ಲಿ ದೃಢವಾದ ಜ್ಞಾನವೇ ಮೋಕ್ಷಕ್ಕೆ ಕಾರಣ ಎಂದು ಹೇಳಲಾಗಿದೆ.

**ಯದಾ ಹ್ಯೇ ವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿ-ಲಯನೇಽಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರ ಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ ಭಯಂ ವಿದುಷೋಽಮನ್ವಾನಸ್ಯ ॥**

ಯಾರಿಗೂ ಪೂರ್ಣವಾಗಿ ತಿಳಿಯಲ್ಪಡದ, ಒಡೆಯನಿಲ್ಲದ, ಮಾತಿಗೆ ನಿಲುಕದ, ಅನನ್ಯಾಶ್ರಿತನಾದ ಪರಮಾತ್ಮನಲ್ಲಿ ನಿರ್ಭೀತಿಯಿಂದ ಧ್ಯಾನಾಸಕ್ತನಿಗೆ ಮಾತ್ರ, ಅವನ ಪ್ರಾಪ್ತಿಯಾಗುವುದು.

ಜ್ಞಾನಿಯೇ ಆಗಲಿ ಅಜ್ಞಾನಿಯೇ ಆಗಲಿ ಯಾರಾದರೂ ಭಗವದ್ರೂಪಗಳಿಗೆ ಅಥವಾ ಭಗವಂತನ ಮೂಲರೂಪಕ್ಕೆ ಅವತಾರರೂಪಗಳಿಗೆ ಭೇದವನ್ನು ತಿಳಿದರೆ ಸಂಸಾರದಲ್ಲಿ ದುಃಖವುಂಟಾಗುತ್ತದೆ. ಏಕೆಂದರೆ, ಆ ಬ್ರಹ್ಮನು ಜ್ಞಾನಿಗಳಿಗೂ ಅಜ್ಞಾನಿಗಳಿಗೂ ಎಲ್ಲರಿಗೂ ಭಯಪ್ರದನಾಗಿದ್ದಾನೆ.

**ತಸ್ಮಾದಿತ್ಯಾದೌ ಯೋಜ್ಯಮ್ । ಹೇತ್ವರ್ಥೇ ವಾ ಹಿ ಶಬ್ದಃ ।**

**ರಸಂ ಲಬ್ಧ್ವೈವ ಆನಂದೀಭವತಿ । ತಲ್ಲಬ್ಧಿಶ್ಚ ತನ್ಮಹಿಮಾ ಜ್ಞಾನಾದೇವ ಯಸ್ಮಾದ್ ಭವತಿ ತಸ್ಮಾತ್ ।**

**ಅದೃಶ್ಯೇ = ಸಾಕಲ್ಯೇನ ಜ್ಞಾನಾಗೋಚರೇ, ಅನಾತ್ಮ್ಯೇ – ಆತ್ಮನಃ = ಜೀವಸ್ಯ ಇಮೇ ಗುಣಾಃ = ಆತ್ಮ್ಯಾಃ, ತದ್ರಹಿತೇ । ಆತ್ಮೈವ ಆತ್ಮ್ಯಂ = ಸ್ವಾಮೀ, ತದ್ರಹಿತೇ ವಾ । ಅನಿರುಕ್ತೇ = ಸಾಕಲ್ಯೇನ ನಿರ್ವಚನಾಗೋಚರೇ । ಅನಿಲಯನೇ = ಅನನ್ಯಾಶ್ರಯೇ ಏತಸ್ಮಿನ್ ಹರೌ ಅಭಯಂ ಯಥಾ ಭವತಿ ತಥಾ ಧ್ಯಾನರೂಪಾಂ ಪ್ರತಿಷ್ಠಾಂ, ವಿಂದತೇ = ಲಭತೇ ।**

**ಅಥ = ಅನಂತರಂ, ಸಃ = ಉಪಾಸಕಃ, ಅಭಯಂ = ಭಗವಂತಂ ಗತಃ = ಪ್ರಾಪ್ತೋ ಭವತಿ, ನಾಜ್ಞಃ ಇತ್ಯರ್ಥಃ ।**

'ಯದಾಹಿ' ಎಂಬ ಈ ಪ್ರಕರಣದ ಪ್ರಾರಂಭದಲ್ಲಿ "ತಸ್ಮಾತ್" ಎಂಬ ಶಬ್ದವನ್ನು ಸೇರಿಸಿಕೊಳ್ಳಬೇಕು. ಅಥವಾ ಹಿ ಎಂಬ ಶಬ್ದಕ್ಕೇ 'ತಸ್ಮಾತ್' ಎಂಬ ಅರ್ಥವನ್ನು ಹೇಳಬಹುದು. ಅದರ ಅಭಿಪ್ರಾಯ ಹೀಗೆ - ಪರಮಾತ್ಮನನ್ನು ಹೊಂದಿಯೇ ಸಾಧಕನು ಆನಂದ ಭರಿತನಾಗುತ್ತಾನೆ, ಅವನನ್ನು ಹೊಂದಬೇಕಾದರೆ ಅವನ ಮಹಿಮೆಯನ್ನು ತಿಳಿದುಕೊಳ್ಳಬೇಕು, ಆದ್ದರಿಂದ, (ಮುಂದೆ ಹೇಳುವ ಮಹಿಮೆಗಳುಳ್ಳ ಭಗವಂತನ ಧ್ಯಾನವನ್ನು ಮಾಡಬೇಕು) ಎಂದರ್ಥ.

ಅದೃಶ್ಯನೆಂದರೆ ಕಣ್ಣಿಗೆ ಸರ್ವಥಾ ಕಾಣದವನು, ಎಂದು ಅರ್ಥವಲ್ಲ. ಅವನನ್ನು ಸಮಗ್ರವಾಗಿ ತಿಳಿಯಲು ಸಾಧ್ಯವಿಲ್ಲ, ಎಂದು ಅರ್ಥ. 'ಅನಾತ್ಮ್ಯ' 'ಆತ್ಮ್ಯ' ಇಲ್ಲದವನು. ಆತ್ಮನಃ ಇಮೇ-ಆತ್ಮ್ಯಾಃ, ಜೀವಾತ್ಮ್ಯನ ಗುಣಸ್ವಭಾವಗಳು ಆತ್ಮ್ಯ. ಅವು ಪರಮಾತ್ಮನಲ್ಲಿ ಇಲ್ಲ. ಹೀಗಾಗಿ ಅವನು ಅನಾತ್ಮ್ಯ. ಆತ್ಮ = ಆಳುವವನು. ಇದೇ ಅರ್ಥ ಆತ್ಮ್ಯ ಶಬ್ದಕ್ಕೂ. ಅನಾತ್ಮ್ಯ ಎಂದರೆ ಒಡೆಯ ನಿಲ್ಲದವನು. ಪರಮಾತ್ಮನನ್ನು ಆಳುವವನು ಮತ್ತೊಬ್ಬನಿಲ್ಲ, ಎಂದು ಅರ್ಥ. ನಿರುಕ್ತನಲ್ಲದವನು ಅನಿರುಕ್ತ.

ಶಬ್ದಗಳಿಂದ ವರ್ಣಿಸಬಹುದಾದ ವ್ಯಕ್ತಿತ್ವ ಇರುವವನು-ನಿರುಕ್ತ. ಪರಮಾತ್ಮನ ವ್ಯಕ್ತಿತ್ವವನ್ನು ಸಮಗ್ರವಾಗಿ ಶಬ್ದಗಳಿಂದ ವರ್ಣಿಸಲಾಗದು. ಆದ್ದರಿಂದ ಅವನು ಅನಿರುಕ್ತ. ನಿಲಯನ ಇಲ್ಲದವನು ಅನಿಲಯನ. ನಿಲಯನ ಎಂದರೆ ಆಶ್ರಯ. ಪರಮಾತ್ಮನು ಮತ್ತೊಬ್ಬರನ್ನು ಅವಲಂಬಿಸಿಲ್ಲವಾದುದರಿಂದ ಅನಿಲಯನ.

ಇಂತಹ ಶ್ರೀಹರಿಯಲ್ಲಿ ನಿರ್ಭೀತನಾಗಿ, ಅವನ ಅನುಗ್ರಹವಾಗುವಂತೆ ಧ್ಯಾನದಲ್ಲಿ ಮಗ್ನನಾಗಬೇಕು. ಅಥ = ಇಂತಹ ಧ್ಯಾನವನ್ನು ಮಾಡಿದರೆ ಸಾಧಕನು ಅಭಯನನ್ನು ಎಂದರೆ ಪರಮಾತ್ಮನನ್ನು ಗತಃ = ಹೊಂದಿದವನಾಗಿ ಆಗುತ್ತಾನೆ, ದೇವರ ಬಳಿ ಸೇರುತ್ತಾನೆ.

**ನ ಕೇವಲಂ ಸಮ್ಯಗ್ ಜ್ಞಾನಾಭಾವೇ ಪರಪ್ರಾಪ್ತ್ಯಭಾವಃ । ವಿಪರೀತ ಜ್ಞಾನೇನ ಅನರ್ಥಪ್ರಾಪ್ತಿಶ್ಚ ಇತ್ಯಾಹ – ಯದಾ ಹ್ಯೇ ವೈಷ ಇತಿ ॥**

**ಉದರಂ – ಉತ್ = ಉತ್ಕೃಷ್ಟಃ, ಅಃ = ಅಕಾರವಾಚ್ಯಃ ವಿಷ್ಣುಃ ಯೇಭ್ಯಃ ಜೀವೇಭ್ಯಃ ತೇ ಉದಾಃ = ಜೀವಾಃ, ವಿಷ್ಣುತೋ ನೀಚಾಃ ಇತ್ಯರ್ಥಃ । ಮಯೂರವ್ಯಂಸಕಾದಯಶ್ಚೇತಿ ಸಮಾಸಃ । ತೇಷು ಜೀವೇಷು ರಮತೇ ಇತಿ ಉದರಮ್ । ಜೀವೇಷು ಪರಸ್ಪರಂ ವಿದ್ಯಮಾನಂ, ಅಂತರಂ = ಭೇದಂ, ಏತಸ್ಮಿನ್ ವಿಷ್ಣೌ, ಏಷಃ = ಜ್ಞಾನೀ ಅಜ್ಞೋ ವಾ, ಕುರುತೇ = ಮನ್ಯತೇ = ಭಗವದ್ರೂಪಾಣಾಂ ಅನ್ಯೋನ್ಯಂ, ಮೂಲರೂಪಸ್ಯ ಚ ಭೇದಂ ಜಾನೀತೇ, ಅಥ = ಅನಂತರಮೇವ ತಸ್ಯ ಭಯಂ ಭವತಿ ।**

**ಏತಾವಾನ್ ವಿಶೇಷಃ — ವಿದುಷಃ ಯಾವನ್ಮುಕ್ತಿ ಕಿಂಚಿತ್ ಭಯಕೃತ್, ಪಶ್ಚಾತ್ ಅಭಯಕೃತ್ । ಅಜ್ಞಸ್ಯ ಸಂಸಾರಭಯಕೃತ್ । ವಿಪರೀತಜ್ಞಸ್ಯ ತು ಮಹಾಭಯಕೃತ್ ಇತಿ ।**

ಸರಿಯಾದ ಜ್ಞಾನ ಇಲ್ಲದಿದ್ದರೆ ಪರಮಾತ್ಮನ ಬಳಿಹೋಗಲು ಸಾಧ್ಯವಿಲ್ಲ. ಅಷ್ಟೇ ಅಲ್ಲ, ಅವನನ್ನು ತಪ್ಪಾಗಿ ತಿಳಿದರೆ ಅನರ್ಥವೂ ಇದೆ ಎನ್ನುವುದನ್ನು ''ಯದಾ ಹ್ಯೇ ವೈಷ'' ಎನ್ನುವ ಉಪನಿಷತ್ತು ತಿಳಿಸುತ್ತಿದೆ.

'ಉದರಂ' ಎಂಬುದು 'ಉತ್+ಅ+ರ' ಈ ಮೂರು ಶಬ್ದಗಳ ಸಮಷ್ಟಿರೂಪ. ಉತ್ ಎಂದರೆ ಉತ್ತಮ. ಅ ಎಂದರೆ ವಿಷ್ಣು. ಅಃ ಉತ್ ಯೇಭ್ಯಃ ತೇ = ಉದಾಃ. ಯಾರಿಂದ ವಿಷ್ಣುವು ಉತ್ತಮನೋ ಅಂತಹ ಜೀವರು 'ಉದ' ಎನಿಸುತ್ತಾರೆ.

ಒಟ್ಟಿನಲ್ಲಿ ವಿಷ್ಣುವಿಗಿಂತ ಕಡಿಮೆ ಮಟ್ಟದ ಜೀವರು ಉದರು. ಅವರಲ್ಲಿ ಇರುವ ಪರಸ್ಪರ ಭೇದವೇ ಉದರ. 'ಜೀವರಂತೆ ಪರಮಾತ್ಮನನ್ನು ಭಿನ್ನನನ್ನಾಗಿ ಭಾವಿಸಿದರೆ' ಎಂದು 'ಉದರಂ ಅಂತರಂ ಕುರುತೇ' ಎಂಬುದರ ಅರ್ಥ.

ಜೀವರಲ್ಲಿ ಪರಸ್ಪರ ಭೇದವಿದ್ದಂತೆ ಪರಮಾತ್ಮನ ಅವತಾರಗಳಾದ ರಾಮ-ಕೃಷ್ಣಾದಿಗಳಲ್ಲೂ ಭೇದವಿದೆ ಎಂದಾಗಲೀ ರಾಮ-ಕೃಷ್ಣಾದಿ ಅವತಾರರೂಪಗಳಿಂದ ಮೂಲರೂಪದ ನಾರಾಯಣನಿಗೆ ಭೇದವಿದೆ ಎಂದಾಗಲೀ ತಿಳಿದರೆ ಅಂತಹವನಿಗೆ ಕೂಡಲೇ ಭಯವುಂಟಾಗುತ್ತದೆ - ದುಃಖವಾಗುತ್ತದೆ. ಅವನು ಅಜ್ಞಾನಿಯಾಗಿರಬಹುದು ಅಥವಾ ಜ್ಞಾನಿಯೇ ಆಗಿರಬಹುದು. ಭಯ ತಪ್ಪಿದ್ದಲ್ಲ. ಆದರೆ ಒಂದು ವಿಶೇಷ ಜ್ಞಾನಿಗಳಿಗೆ ಮೋಕ್ಷಕ್ಕೆ ಹೋಗುವವರೆಗೆ ಮಾತ್ರ ಭಯ, ಆಮೇಲೆ ಅಭಯ. ಅಜ್ಞಾನಿಗಳಿಗೆ ಸಂಸಾರಭಯಪ್ರದ. ತಪ್ಪು ತಿಳಿದವರಿಗೆ ನರಕಾದಿ ಮಹಾಭಯಪ್ರದ. (ಆದ್ದರಿಂದ ಪರಮಾತ್ಮನನ್ನು ತಪ್ಪಾಗಿ ತಿಳಿಯದೇ ಅವನ ಮಹಿಮೆಗಳನ್ನು ತಿಳಿದು, ಧ್ಯಾನಿಸಿ ಕಂಡುಕೊಳ್ಳಬೇಕು.)

**ವಿದುಷೋಽಪಿ ಭಯಕೃತ್ ಇತ್ಯುಕ್ತೇ ಅರ್ಥೇ ಶ್ಲೋಕಂ ಪ್ರಮಾಣಯತಿ - ತದಪಿ ಇತಿ ॥**

ಪರಮಾತ್ಮನು ಜ್ಞಾನಿಗಳಿಗೂ ಭಯಪ್ರದನಾಗಿದ್ದಾನೆ ಎನ್ನುವ ವಿಷಯದಲ್ಲಿ ಉಪನಿಷತ್ತು ಆಧಾರವನ್ನು ''ತದಪಿ'' ಎನ್ನುವ ಮುಂದಿನ ಭಾಗದಲ್ಲಿ ಉದಾಹರಿಸುತ್ತಿದೆ.

**ತದಪ್ಯೇಷ ಶ್ಲೋಕೋ ಭವತಿ ।**

**ಭೀಷಾಸ್ಮಾದ್ ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಸ್ಮಾದ್ ಅಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ ॥ ೧೬ ॥**

ಈವರೆಗೆ ಹೇಳಿದ ವಿಷಯದಲ್ಲಿ ಹೀಗೊಂದು ಶ್ಲೋಕವಿದೆ - ಈ ಬ್ರಹ್ಮನಿಗೆ ಹೆದರಿ ಗಾಳಿ ಬೀಸುತ್ತಿದೆ, ಅವನಿಗೆ ಹೆದರಿ ಸೂರ್ಯನು ಉದಿಸುತ್ತಿದ್ದಾನೆ. ಅವನಿಗೆ ಹೆದರಿ ಅಗ್ನಿಯು ತನ್ನ ಕರ್ತವ್ಯವನ್ನು ನೆರವೇರಿಸುತ್ತಾನೆ. ಇಂದ್ರನು ಮಳೆಯನ್ನು ಸುರಿಸುತ್ತಾನೆ. ಎಲ್ಲರಿಗೂ ಭಯಂಕರನಾದ ಯಮನೂ ತನ್ನ ಕರ್ತವ್ಯ ಮಾಡಲು ಓಡುತ್ತಾನೆ. ಹೀಗೆ ಈ ಶ್ಲೋಕ.

**ತತ್-ತತ್ರ=ಉಕ್ತಾರ್ಥೇ ಏಷಃ ಶ್ಲೋಕೋಽಪಿ ಭವತಿ ಇತ್ಯರ್ಥಃ । ಅಸ್ಮಾತ್= ಅಸ್ಯ ಬ್ರಹ್ಮಣಃ, ಭೀಷಾ = ಭಯೇನ ವಾತಃ ಪವತೇ । ಭೀಷೋದೇತಿ ಇತ್ಯತ್ರಾಪಿ ಅಸ್ಮಾದಿತ್ಯನ್ವೇತಿ । ಅಗ್ನಿಃ ಪಚನಾದಿ ವ್ಯಾಪಾರಂ ಕರೋತಿ । ಇಂದ್ರಃ ತ್ರೈಲೋಕ್ಯಪಾಲನ - ವರ್ಷಣಾದಿ ವ್ಯಾಪಾರಂ ಕರೋತಿ ಇತಿ ಚ ಯೋಜ್ಯಮ್ । ಪಂಚಮೋ ಮೃತ್ಯುಃ = ಯಮೋಽಪಿ ಸ್ವವ್ಯಾಪಾರಕರಣಾಯ ಧಾವತಿ । ಭೀಷಾಸ್ಮಾದಿತ್ಯನುಷಂಗಃ । ಏತಚ್ಚ ಉಪಲಕ್ಷಣಮ್ । ಸರ್ವೇಽಪಿ ದೇವಾದಯಃ ಅಸ್ಯ ಭಯೇನೈವ ಸ್ವ-ಸ್ವವ್ಯಾಪಾರಾನ್ ಕುರ್ವಂತಿ ಇತ್ಯಪಿ ಧ್ಯೇಯಮ್ । ಇತ್ಯೇಷ ಶ್ಲೋಕ ಇತಿ ಇತಿ ಪದಸ್ಯ ಅನ್ವಯಃ ॥ ೧೬ ॥**

'ತದಪ್ಯೇಷಃ' ಎಂಬಲ್ಲಿ ತತ್ ಎಂದರೆ ತತ್ರ = ಇದುವರೆಗೆ ಹೇಳಿದ ವಿಷಯದಲ್ಲಿ, ಈ ಶ್ಲೋಕವೂ ಆಧಾರವಾಗಿದೆ ಎಂದು ಅರ್ಥ.

'ಅಸ್ಮಾತ್' ಇದನ್ನು 'ಅಸ್ಯ' ಎಂದು ಷಷ್ಠ್ಯಂತವಾಗಿ ತೆಗೆದುಕೊಳ್ಳಬೇಕು. ಈ ಬ್ರಹ್ಮನ ಭೀಷಾ = ಹೆದರಿಕೆಯಿಂದ, ವಾಯು ಬೀಸುತ್ತಿದ್ದಾನೆ. 'ಭೀಷೋದೇತಿ ಸೂರ್ಯಃ' ಈ ಮುಂದಿನ ವಾಕ್ಯದಲ್ಲೂ 'ಅಸ್ಮಾತ್' ಎಂಬ ಶಬ್ದವನ್ನು ಸೇರಿಸಿಕೊಳ್ಳಬೇಕು. ಬ್ರಹ್ಮನ ಭಯದಿಂದ ಅಗ್ನಿಯೂ ಹಸಿಯನ್ನು ಬೇಯಿಸುವ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಾನೆ. ಇಂದ್ರನು ಭೂಮಿ-ಅಂತರಿಕ್ಷ-ಸ್ವರ್ಗಲೋಕಗಳನ್ನು ರಕ್ಷಿಸುವ ಮತ್ತು ಮಳೆ ಸುರಿಸುವ ತನ್ನ ಕೆಲಸವನ್ನು ಮಾಡುತ್ತಾನೆ. ಇದುವರೆಗೆ ಹೇಳಿರುವ ನಾಲ್ಕು ದೇವತೆಗಳಿಗೆ ಐದನೆಯವನಾದ ಯಮನೂ ಹೆದರಿ ತನ್ನ ಕರ್ತವ್ಯವನ್ನು ಮಾಡಲು ಧಾವಿಸುತ್ತಾನೆ. ಇಲ್ಲೂ 'ಭೀಷಾಸ್ಮಾತ್' ಎಂಬ ಪದಗಳನ್ನು ಸೇರಿಸಿಕೊಳ್ಳಬೇಕು. ಇಷ್ಟೇ ಅಲ್ಲ, ಎಲ್ಲ

ದೇವತೆಗಳೂ ಬ್ರಹ್ಮನ ಭಯದಿಂದಲೇ ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತಾರೆ, ಎಂದೂ ತಿಳಿಯಬೇಕು.

ಕೊನೆಯಲ್ಲಿರುವ ಇತಿ ಶಬ್ದವನ್ನು ಶ್ಲೋಕಶಬ್ದದೊಂದಿಗೆ ಸೇರಿಸಿ ''ಇತಿ ಏಷ ಶ್ಲೋಕಃ'' ಎಂದು ವಾಕ್ಯವನ್ನು ಪೂರ್ಣಗೊಳಿಸಬೇಕು.|| ೧೬ ||

### ಆನಂದ ತಾರತಮ್ಯ

**ಪೂರ್ವಂ ಜ್ಞಾನಿನಃ ಸರ್ವೇಽಪಿ ಮುಚ್ಯಂತೇ, ತತ್ರಾಪಿ ಕಶ್ಚಿದೇವ ಸಮ್ಯಕ್ ಇತಿ ಉಕಾರೇಣ ಸಂಕ್ಷಿಪ್ಯ ಉತ್ತರಂ ಉಕ್ತಮ್ । ತದಿದಾನೀಂ ವಿದುಷಾಂ ಉಕ್ತಂ ಭಯಕರ್ತೃತ್ವಂ ಆಮುಕ್ತಿ ಏವ ಇತಿ ಜ್ಞಾಪಯಿತುಂ ವಿವೃಣೋತಿ - 'ಸೈಷಾನಂದಸ್ಯ ಮೀಮಾಂಸಾ ಭವತಿ' ಇತ್ಯಾದಿನಾ ।**

ಹಿಂದೆ ವರುಣದೇವರ ಪ್ರಶ್ನೆಗೆ ಉತ್ತರವಾಗಿ ಬ್ರಹ್ಮದೇವರು ''ಜ್ಞಾನಿಗಳೆಲ್ಲರೂ ಮೋಕ್ಷಕ್ಕೆ ಹೋಗುತ್ತಾರೆ, ಅವರಲ್ಲೂ ಬ್ರಹ್ಮದೇವರು ಮಾತ್ರ ಸರಿಯಾಗಿ ಪರಮಾತ್ಮನನ್ನು ಅನುಭವಿಸುತ್ತಾರೆ'' ಎಂದು, 'ಉ' ಎನ್ನುವ ಸಂಕ್ಷಿಪ್ತವಾದ ಒಂದೇ ಅಕ್ಷರದಿಂದ ಸಮ್ಮತಿಯನ್ನು ನೀಡಿದ್ದರು. ಆ ವಿಷಯವನ್ನು ಮುಂದಿನ ಭಾಗದಲ್ಲಿ ವಿವರಿಸುತ್ತಾ ಜ್ಞಾನಿಗಳಿಗೆ ಭಗವಂತನು ಮುಕ್ತಿಪರ್ಯಂತವಾಗಿಯೇ ಭಯವನ್ನು ಕೊಡುತ್ತಾನೆ, ಆಮೇಲೆ ಅಭಯಪ್ರದನಾಗಿದ್ದಾನೆ ಎಂದು ತಿಳಿಸುತ್ತಾರೆ.

**ಯದ್ವಾ ಬ್ರಹ್ಮಣಃ ಯತ್ ಜಗಚ್ಚೇಷ್ಟಕತ್ವಾದಿನಾ ಪೂರ್ಣಾನಂದತ್ವಂ ಉಕ್ತಮ್ । ತತ್ ಜ್ಞಾನಿನಾಂ ಮುಕ್ತಾನಾಂ ಚ ಸುಖತಾರತಮ್ಯೋಕ್ತಿಪೂರ್ವಂ ವಿವೃಣೋತಿ - ಸೈಷೇತಿ ॥**

ಅಥವಾ ಆನಂದತಾರತಮ್ಯವನ್ನು ಹೇಳುವ ಈ ಪ್ರಕರಣಕ್ಕೆ ಸಾಂಗತ್ಯವನ್ನು ಹೀಗೂ ತಿಳಿಯಬಹುದು - ಹಿಂದೆ 'ಕೋ ಹ್ಯೇವಾನ್ಯಾತ್' ಎಂದು ಬ್ರಹ್ಮನು ಜಗತ್ ಪ್ರೇರಕನಾದುದರಿಂದ, ಪೂರ್ಣಾನಂದನಾಗಿದ್ದಾನೆ, ಎಂದು ಹೇಳಲಾಯಿತು. ಅದನ್ನೇ ಮುಕ್ತರಲ್ಲಿ ಆನಂದತಾರತಮ್ಯವನ್ನು ಹೇಳುವ ಮೂಲಕ ಈ ಮುಂದಿನ ಪ್ರಕರಣದಲ್ಲಿ ವಿವರಿಸುತ್ತಾರೆ.

ಸೈಷಾನಂದಸ್ಯ ಮೀಮಾꣳಸಾ ಭವತಿ । ಯುವಾ ಸ್ಯಾತ್ ಸಾಧು ಯುವಾಧ್ಯಾಯಕಃ । ಆಶಿಷ್ಠೋ ದ್ರಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನಂದಃ। ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ ॥ ೧೭ ॥

ಮೋಕ್ಷದಲ್ಲಿ ಸುಖ-ಸಂತೋಷಗಳು ಎಲ್ಲರಿಗೂ ಒಂದೇ ವಿಧವೋ, ವ್ಯತ್ಯಾಸವಿದೆಯೋ? ಈ ವಿಷಯದಲ್ಲಿ ಜಿಜ್ಞಾಸೆ ಬರುವುದು ಸಹಜ. (ಅಲ್ಲೂ ಆನಂದ ತಾರತಮ್ಯವಿದೆ ಎಂದೇ ಸಿದ್ಧಾಂತ.)

ವಿಷ್ಣುವಿನೊಂದಿಗಿರುವ, ಸದ್ಗುಣಭರಿತನಾದ, ಅಧ್ಯಯನಫಲಸಂಪನ್ನನಾದ, ನಿತ್ಯಪೂರ್ಣಸುಖವುಳ್ಳ, ಗಟ್ಟಿಮುಟ್ಟಾದ, ಬಲಿಷ್ಠನಾದ, ಒಬ್ಬ ಚಕ್ರವರ್ತಿಯು ಮುಕ್ತನಾದರೆ ಅವನು ಮೊದಲು ತ್ರೇತಾಯುಗದಲ್ಲಿ ಸಂಸಾರಿಯಾಗಿ ಚಕ್ರವರ್ತಿಯಾಗಿದ್ದು, ಅವನ ಒಡೆತನದಲ್ಲಿರುವ ಭೂಮಿಯು ಸಂಪದ್ಭರಿತ-ವಾಗಿದ್ದರೆ ಅವನಿಗೆಷ್ಟು ಸುಖವಿದ್ದೀತೋ ಅದನ್ನು ಮೋಕ್ಷದ ಒಂದು ಆನಂದವೆಂದು ಪರಿಗಣಿಸಿದರೆ ಆ ಆನಂದದ ನೂರುಪಟ್ಟು ಹೆಚ್ಚು ಆನಂದವು ಮುಕ್ತರಾದ ಮನುಷ್ಯ ಗಂಧರ್ವರಿಗಿರುತ್ತದೆ. (ಮೋಕ್ಷದಲ್ಲಿರುವ ಆ ಮನುಷ್ಯಗಂಧರ್ವರು ಶ್ರವಣಾದಿಗಳ ಫಲವನ್ನೂ ಪಡೆದವರೂ ಆಪ್ತಕಾಮರೂ ಆಗಿರುತ್ತಾರೆ).

"ಏಷ ಹ್ಯೇವಾನಂದಯಾತಿ" ಇತಿ ಆನಂದಯಿತೃತ್ವಂ ಉಕ್ತಮ್ । ತತ್ ಮುಕ್ತಾವೇವ ಮುಖ್ಯಮ್, ಇತಿ ತತ್ರ ಸರ್ವೇಷಾಂ ಕಿಂ ಏಕಾಧಾ ನೈಕಧಾ ಇತಿ ವಿಚಾರೋ ಭವತಿ । ಏವಂ ವಿಚಾರೇ ಅನೇಕಧಾ ಇತಿ ಉಚ್ಯತೇ । ತತ್ರ ಮಾನುಷೋತ್ತಮಂ ಆರಭ್ಯ ವಿರಿಂಚಿಪರ್ಯಂತಂ ಆನಂದತಾರತಮ್ಯಂ ವಕ್ತುಂ ಮನುಷ್ಯೋತ್ತಮ ಚಕ್ರವರ್ತ್ಯಾನಂದಂ ಪೂರ್ವಾವಧಿಭೂತಂ ವಕ್ತುಂ ಮುಕ್ತಚಕ್ರವರ್ತಿನಃ ವಿಶೇಷಣಾನಿ ಆಹ - 'ಯುವಾ ಸ್ಯಾತ್' ಇತ್ಯಾದಿನಾ ॥

ಪರಮಾತ್ಮನು ಆನಂದದಾಯಕ ಎಂದು ''ಏಷ ಹ್ಯೇವಾನಂದಯಾತಿ'' ಎಂದು ಹಿಂದೆ ಹೇಳಲಾಯಿತು. ಅವನು ಆನಂದದಾಯಕನಾಗುವುದು ಮುಕ್ತರಿಗೇ ಮುಖ್ಯವಾಗಿ. ಆಗ ಈ ಜಿಜ್ಞಾಸೆ ಬರುತ್ತದೆ - ಮೋಕ್ಷದಲ್ಲಿ ಎಲ್ಲರಿಗೂ ಸಮಾನವಾದ ಸುಖವಿದೆಯೋ ಅಥವಾ ಆ ಸುಖದಲ್ಲಿ ವ್ಯತ್ಯಾಸವಿದೆಯೋ, ಎಂದು. ವಸ್ತುತಃ ಮೋಕ್ಷದಲ್ಲಿ ಎಲ್ಲರಿಗೂ ಒಂದೇ ರೀತಿಯ ಸುಖವಲ್ಲ; ಆ ಸುಖದಲ್ಲಿ ತಾರತಮ್ಯವಿದೆ. ಮನುಷ್ಯೋತ್ತಮರನ್ನು ಆರಂಭಿಸಿ ಜೀವೋತ್ತಮರಾದ ಬ್ರಹ್ಮದೇವರವರೇ ಸುಖದಲ್ಲಿರುವ ತಾರತಮ್ಯವನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ. ಈ ಆನಂದ ತಾರತಮ್ಯ ಮನುಷ್ಯೋತ್ತಮರಿಂದ ಆರಂಭಗೊಳ್ಳುತ್ತದೆ. ಚಕ್ರವರ್ತಿಗಳು ಮನುಷ್ಯೋತ್ತಮರು. ಅಂತಹ ಮುಕ್ತ ಚಕ್ರವರ್ತಿಗಳ ಗುಣಗಳನ್ನು ''ಯುವಾ ಸ್ಯಾತ್'' ಎಂದು ಮುಂತಾಗಿ ಉಪನಿಷತ್ತಿನಲ್ಲಿ ಹೇಳಲಾಗಿದೆ.

**ಯುವಾ ''ಯು ಮಿಶ್ರಣೇ'' ಕರ್ಮಣಿ ಕ್ವಿಪ್ । ವಾತೇಃ ಕನಿನ್ । ಯುಶ್ಚಾಸೌ ವಾ ಚ = ಯುವಾ । ವಿಷ್ಣುನಾ ಸಹ ಗಚ್ಛತೀತಿ ಯುವಾ ।**

**''ಪ್ರಾಜ್ಞೇನಾತ್ಮನಾ ಅನ್ವಾರೂಢಃ ಉತ್ಸರ್ಜದ್ ಯಾತಿ''**

**ಇತಿ ಶ್ರುತೇಃ ।**

**ಸಾಧುಭಿಃ ಗುಣೈಃ ಯುಕ್ತತ್ವಾತ್ ಸಾಧುಯುವಾ । ಸಾಧುಪದೋಪಪದಾತ್ 'ಯು ಮಿಶ್ರಣೇ' ಇತ್ಯತೋ ವಾ 'ಯುಜೇರ್ವಾ' ಕ್ವನಿಪ್ । ಜಲೋಪಃ ಛಾಂದಸಃ ।**

ಯುವಾ ಎಂಬ ಶಬ್ದಕ್ಕೆ ಹೀಗೆ ಅರ್ಥ - ಮಿಶ್ರಣ ಎಂಬ ಅರ್ಥದ 'ಯು' ಧಾತುವಿಗೆ ಕರ್ಮಾರ್ಥದಲ್ಲಿ ಕ್ವಿಪ್ ಪ್ರತ್ಯಯವು ಬಂದು 'ಯು' ಎಂದು ರೂಪವಾಗಿದೆ. ಗತಿ, ಎಂಬ ಅರ್ಥದ 'ವಾ' ಧಾತುವಿಗೆ ಕನಿನ್ ಪ್ರತ್ಯಯ ಬಂದರೆ 'ವಾ' ಎಂದು ರೂಪವಾಗುತ್ತದೆ. ಇವೆರಡಕ್ಕೆ ಕರ್ಮಧಾರಯ ಸಮಾಸಮಾಡಬೇಕು- ''ಯುಶ್ಚಾಸೌ ವಾಚ ಯುವಾ''. ವಿಷ್ಣುವಿನಿಂದ ಯುಕ್ತನಾಗಿ ಹೋಗುವವನು, ಯುಕ್ತನಾಗಿ ವಿಹರಿಸುತ್ತಿರುವವನು, ಎಂದು ಅರ್ಥ. ಛಾಂದೋಗ್ಯೋಪನಿಷತ್ತು ಹೀಗೆಯೇ ಹೇಳುತ್ತದೆ- ''ಮೋಕ್ಷಯೋಗ್ಯ ಜೀವನು ಪ್ರಾಜ್ಞರೂಪದ ಪರಮಾತ್ಮನ ಜೊತೆಗೆ ದೇಹಬಿಟ್ಟು ಹೋಗುತ್ತಾನೆ'' ಎಂದು.

ಸಾಧುಯುವಾ ಎಂದರೆ - ಸಾಧು=ಒಳ್ಳೆಯ ಗುಣಗಳು. ಅಂತಹ ಗುಣಗಳಿಂದ ತುಂಬಿರುವವನು ಸಾಧುಯುವಾ. ಮಿಶ್ರಣ ಎಂಬ ಅರ್ಥದ 'ಯು' ಧಾತುವಿಗೆ 'ಕ್ವನಿಪ್' ಪ್ರತ್ಯಯ ಬಂದು 'ಯು' ಎಂಬ ರೂಪವಾಗಿದೆ. ಅಥವಾ ಸಂಬಂಧ ಎಂಬ ಅರ್ಥದ 'ಯುಜ್' ಧಾತುವಿಗೆ ಕ್ವನಿಪ್ ಪ್ರತ್ಯಯ ಬಂದು 'ಯು' ಎಂದಾಗಿದೆ. 'ಯುಜ್' ಧಾತುವಿನ ಜಕಾರಕ್ಕೆ ಛಾಂದಸ ವ್ಯಾಕರಣದಂತೆ ಲೋಪವಾಗಿದೆ.

ಇದು ತೈತ್ತಿರೀಯ ಭಾಷ್ಯದಲ್ಲಿ ಹೇಳಿರುವ ಅರ್ಥ.

**ಅನುವ್ಯಾಖ್ಯಾನೇ ತು - ''ಯುವಾ ನಿತ್ಯತರುಣಃ । ಸಾಧುನಾ ವಿಷ್ಣುನಾ ಯುತಃ ಸಾಧುಯುವಾ'' ಇತಿ ಉಕ್ತಮ್ ।**

ಅನುವ್ಯಾಖ್ಯಾನದಲ್ಲಿ ಆಚಾರ್ಯರು ಈ ಎರಡು ಪದಗಳಿಗೆ ಇನ್ನೊಂದು ಅರ್ಥವನ್ನೂ ಹೇಳಿದ್ದಾರೆ - ಯುವಾ ಎಂದರೆ ನಿತ್ಯತರುಣ ಎಂದು ಅರ್ಥ. ಸಾಧುವಿನಿಂದ ಸಹಿತನಾದ ಯುವಕ = ಸಾಧುಯುವಾ. ಸಾಧು ಎಂದರೆ ವಿಷ್ಣು. ಹೀಗೆ ಮೋಕ್ಷದಲ್ಲಿರುವ ಚಕ್ರವರ್ತಿಗಳಾದ ಮನುಷ್ಯೋತ್ತಮರು ನಿತ್ಯ-ಯುವಕರಾಗಿಯೂ ವಿಷ್ಣುವಿನಿಂದ ಕೂಡಿಕೊಂಡೂ ಇರುತ್ತಾರೆ ಎಂದು ಅರ್ಥ.

**ಅಧ್ಯಾಯಕಃ - ಆಙ್-ಅಧಿ-ಉಪಸರ್ಗದ್ವಯಪೂರ್ವಕಾತ್ ''ಇಙ್ ಅಧ್ಯಯನೇ ಇತ್ಯತಃ 'ಣ್ವುಲ್' ಪ್ರತ್ಯಯೇ ಅಕಾದೇಶೇ ವೃದ್ಧಿ-ಆಯಾದೇಶಯೋಃ ನಿಷ್ಪತ್ತೇಃ - ಸಮ್ಯಗಧ್ಯಯನ ಕರ್ತಾ ಇತ್ಯರ್ಥಃ । ಸಮ್ಯಕ್ತ್ವಂ ಚ ಮುಖ್ಯಾಖ್ಯ - ಅಧ್ಯಯನ ಫಲವತ್ವಮ್ ।**

'ಆಧ್ಯಾಯಕಃ' ಶಬ್ದಕ್ಕೆ ಅರ್ಥ - ಈ ಶಬ್ದವು ಆಙ್ ಮತ್ತು ಅಧಿ ಎಂಬ ಎರಡು ಉಪಸರ್ಗಗಳಿಂದ ಸೇರಿದ, ಅಧ್ಯಯನ ಎಂಬ ಅರ್ಥದ ಇಙ ಧಾತುವಿನಿಂದ ನಿಷ್ಪನ್ನವಾಗಿದೆ. ಆ ಧಾತುವಿಗೆ 'ಣ್ವುಲ್' ಎಂಬ ಪ್ರತ್ಯಯ ಬರುತ್ತದೆ. ಆ ಪ್ರತ್ಯಯದಲ್ಲಿ ಉಳಿಯುವ ವು ಎಂಬ ಅಂಶಕ್ಕೆ ಅಕ ಎಂಬ ಆದೇಶ ಬಂದರೆ ಅಧಿ+ಇ+ಅಕ ಎಂದಾಗುತ್ತದೆ. ಧಾತುವಿನ ಇಕಾರಕ್ಕೆ ವೃದ್ಧಿ ಐಕಾರ, ಅದಕ್ಕೆ 'ಆಯ್' ಎಂಬ ಯಾಂತಾದೇಶ ಆಧಿ+ಆಯ್+ಅಕ. ಯಣ್ ಸಂಧಿಯಾದಾಗ ಆಧ್ಯಾಯಕ ಎಂದಾಗುತ್ತದೆ. ಚೆನ್ನಾಗಿ ಅಧ್ಯಯನ ಮಾಡಿದವನು ಎಂದು ಅರ್ಥ.

ಚೆನ್ನಾಗಿ ಎಂದರೆ ಆ ಅಧ್ಯಯನದ ಫಲವಾಗಿ ಮೋಕ್ಷವು ಲಭಿಸಿದೆ, ಅಂತಹ ಅಧ್ಯಯನ. ಒಟ್ಟಿನಲ್ಲಿ ಶಾಸ್ತ್ರಾಧ್ಯಯನ ಮಾಡಿದ ಫಲವಾಗಿ ಮೋಕ್ಷದಲ್ಲಿ ಇರುವವನು, ಎಂದಾಗುತ್ತದೆ.

**ಆ ಸಮಂತಾತ್ ಶಂ ಅಸ್ಯೇತಿ - ಆಶಃ । ಅತಿಶಯೇನ ಆಶಃ - ಆಶಿಷ್ಠಃ । ನಿತ್ಯಪೂರ್ಣಸುಖವಾನ್ ಇತ್ಯರ್ಥಃ ।**

**ಅತಿಶಯೇನ ದೃಢಃ ದೃಢಿಷ್ಠಃ । 'ರ ಋತೋ ಹಲಾದೇಃ ಲಘೋಃ' ಇತಿ ರಭಾವಾಭಾವಃ ಛಾಂದಸಃ ।**

**ಅತಿಶಯೇನ ಬಲೀ-ಬಲಿಷ್ಠಃ । 'ಯುವಾ ಸ್ಯಾತ್' ಇತ್ಯಾದೇಃ ಯದಿ ಮುಕ್ತಃ ಸ್ಯಾತ್, ಇತ್ಯರ್ಥಃ ।**

'ಆಶ' ಎಂಬ ಶಬ್ದದಲ್ಲಿ 'ಆ' ಎಂಬ ಅವ್ಯಯ ಮತ್ತು 'ಶಂ' ಎಂಬ ಶಬ್ದ ಇವೆರಡಿದೆ. ಆ ಎಂದರೆ ಸಮಗ್ರವಾದ, ಶಂ=ಸುಖ. ಅತಿಹೆಚ್ಚಿನ ಸುಖ ಎಂಬ ಅರ್ಥದಲ್ಲಿ-ಆಶಿಷ್ಠಃ ಎಂದಾಗಿದೆ. ಒಟ್ಟಿನಲ್ಲಿ ನಿತ್ಯವಾದ, ಪೂರ್ಣವಾದ ಸುಖವುಳ್ಳವನು ಎಂದು ಅರ್ಥ.

ಅತ್ಯಂತ ದೃಢಕಾಯನಾದವನು- ದೃಢಿಷ್ಠ. ಪಾಣಿನಿಯ ವ್ಯಾಕರಣದಂತೆ 'ದೃ' ಎಂಬಲ್ಲಿರುವ ಋಕಾರಕ್ಕೆ ರಕಾರ ಬರಬೇಕು. ಇದು ವೈದಿಕ ಪ್ರಯೋಗವಾದುದರಿಂದ ಪಾಣಿನಿಯ ಸೂತ್ರದ ನಿಬಂಧನೆ ವೇದಕ್ಕಿಲ್ಲ. ಆದ್ದರಿಂದ ದ್ರಢಿಷ್ಠಃ ಎಂದು ಲೌಕಿಕಭಾಷಾ ಪ್ರಯೋಗವಾದರೂ ವೇದದಲ್ಲಿ ದೃಢಿಷ್ಠಃ ಎಂದಾಗಿದೆ. ಅತ್ಯಂತ ಬಲಿಷ್ಠನಾದವನು - ಬಲಿಷ್ಠ.

'ಯುವಾ ಸ್ಯಾತ್ ಸಾಧು ಯುವಾ' ಇತ್ಯಾದಿ ವಿಶೇಷಣಗಳ ಅಭಿಪ್ರಾಯ ಮನುಷ್ಯ ಚಕ್ರವರ್ತಿಯೊಬ್ಬ ಮುಕ್ತನಾದರೆ, ಎಂದು,

**ತಸ್ಯ = ಏವಂ ರೂಪ ವಿಶೇಷಣಯುಕ್ತಸ್ಯ ಮುಕ್ತ ಚಕ್ರವರ್ತಿನಃ ತ್ರೇತಾಯುಗೇ ಸಂಸಾರದಶಾಯಾಂ ಇಯಂ ಸರ್ವಾ ಪೃಥಿವೀ, ವಿತ್ತಸ್ಯ = ವಿತ್ತೇನ ಪೂರ್ಣಾ ಸ್ಯಾತ್ । ತದಾ ತಸ್ಯ ಯತ್ ಸುಖಂ ಸಃ ಏಕಃ ಮಾನುಷಃ ಆನಂದಃ । ಮುಕ್ತಮನುಷ್ಯ ಸಂಬಂಧೀ ಏಕಃ ಆನಂದಃ ಇತ್ಯರ್ಥಃ ।**

**ತೇ= ಪ್ರಸಿದ್ಧಾಃ ಯೇ ಶತಂ ಮಾನುಷಾಃ = ಮನುಷ್ಯ ಚಕ್ರವರ್ತಿ ಸಂಬಂಧಿನಃ ಆನಂದಾಃ, ಸ ಏಕಃ ಮನುಷ್ಯ ಗಂಧರ್ವಾಣಾಂ ಆನಂದಃ ಇತ್ಯರ್ಥಃ ॥ ೧೭ ॥**

ತಸ್ಯ ಎಂದರೆ ಹಿಂದೆ ಹೇಳಿದ ವಿಶೇಷಣಗಳಿಂದ ಕೂಡಿರುವ ಮುಕ್ತನಾದ ಚಕ್ರವರ್ತಿಗೆ ತ್ರೇತಾಯುಗದಲ್ಲಿ ಅವರ ಆಡಳಿತದಲ್ಲಿರುವ ಭೂಮಿಯು ಸಂಮೃದ್ಧವಾಗಿದ್ದರೆ ಅವನಿಗಿರುವ ಸುಖ ಮುಕ್ತ ಮನುಷ್ಯರ ಒಂದು ಆನಂದ. ಇಂತಹ ನೂರು ಮಾನುಷ ಆನಂದಗಳು ಮುಕ್ತರಾದ ಮನುಷ್ಯಗಂಧರ್ವರ ಒಂದು ಆನಂದ ॥ ೧೭ ॥

**ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಮನುಷ್ಯ-**

**ಗಂಧರ್ವಾಣಾಮಾನಂದಾಃ । ಸ ಏಕೋ ದೇವಗಂಧರ್ವಾಣಾಮಾ-**

**ನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ।**

**ತೇ ಯೇ ಶತಂ ದೇವಗಂಧರ್ವಾಣಾಮಾನಂದಾಃ । ಸ ಏಕಃ**

**ಪಿತೃಣಾಂ ಚಿರಲೋಕ ಲೋಕಾನಾಮಾನಂದಃ । ಶ್ರೋತ್ರಿಯಸ್ಯ**

**ಚಾಕಾಮಹತಸ್ಯ ।**

**ತೇ ಯೇ ಶತಂ ಪಿತೃಣಾಂ ಚಿರಲೋಕ ಲೋಕಾನಾಮಾನಂದಾಃ ।**

**ಸ ಏಕ ಆಜಾನಜಾನಾಂ ದೇವಾನಾಮಾನಂದಃ । ಶ್ರೋತ್ರಿಯಸ್ಯ**

**ಚಾಕಾಮಹತಸ್ಯ ।**

**ತೇ ಯೇ ಶತಮಾಜಾನಜಾನಾಂ ದೇವಾನಾಮಾನಂದಾಃ । ಸ ಏಕಃ**

**ಕರ್ಮದೇವಾನಾಂ ದೇವಾನಾಮಾನಂದಃ ॥ ೧೮ ॥**

ಶ್ರೋತ್ರಿಯ, ಅಕಾಮಹತ ಎಂಬ ಎರಡೂ ವಿಶೇಷಣಗಳನ್ನು ಹಿಂದಿನ ಮಂತ್ರದಲ್ಲಿರುವ ಮನುಷ್ಯಗಂಧರ್ವರಿಗೆ ಅನ್ವಯಿಸಬೇಕು.

ಶಾಸ್ತ್ರಾಧ್ಯಯನದ ಫಲವಾದ ಮೋಕ್ಷವನ್ನು ಪಡೆದ, ಆಪ್ತಕಾಮರಾದ ಮನುಷ್ಯಗಂಧರ್ವರ ಒಂದು ಆನಂದ ಎಂದು ಅರ್ಥ.

ಇಂತಹ ಮನುಷ್ಯಗಂಧರ್ವರ ಆನಂದಕ್ಕಿಂತ ನೂರುಪಟ್ಟು ಮಿಗಿಲಾದ ಆನಂದ ಶ್ರೋತ್ರಿಯರಾದ, ಆಪ್ತಕಾಮರಾದ ದೇವಗಂಧರ್ವರಿಗೆ ಮೋಕ್ಷದಲ್ಲಿದೆ.

ಈ ದೇವಗಂಧರ್ವರ ಆನಂದದ ನೂರುಪಟ್ಟು ಮಿಗಿಲಾದ ಆನಂದವು ಚಿರಂತನ ಲೋಕವನ್ನು ಹೊಂದಿರುವ, ಶ್ರೋತ್ರಿಯರಾದ, ಆಪ್ತಕಾಮರಾದ ಮುಕ್ತರಾದ ಪಿತೃಗಳದ್ದಾಗಿದೆ.

ಇಂತಹ ಚಿರಲೋಕ ಪಿತೃಗಳ ನೂರುಪಟ್ಟು ಹೆಚ್ಚಿನ ಆನಂದವು ಅಧ್ಯಯನದ ಫಲವನ್ನು ಪಡೆದಿರುವ, ಪೂರ್ಣಕಾಮರಾದ ಮುಕ್ತ ಆಜಾನಜದೇವತೆಗಳದ್ದಾಗಿದೆ.

ಈ ಅಜಾನಜದೇವತೆಗಳ ನೂರು ಆನಂದವು ಶ್ರೋತ್ರಿಯರಾದ, ಪೂರ್ಣಕಾಮರಾದ ಮುಕ್ತ ಕರ್ಮದೇವತೆಗಳ ಒಂದು ಆನಂದ.

**ಶ್ರೋತ್ರಿಯಾಣಾಂ ಅಕಾಮಹತಾನಾಂ ಚೇತಿ ವಚನ ವ್ಯತ್ಯಯೇನ ಯೋಜ್ಯಮ್ । ಏವಮಗ್ರೇಽಪಿ ಸರ್ವತ್ರ ವಿಶೇಷಣದ್ವಯಸ್ಯ ವಚನವ್ಯತ್ಯಯೇನ ಪೂರ್ವೋಕ್ತ ಸಾಮಾನಾಧಿಕರಣ್ಯಂ ಧ್ಯೇಯಮ್ ।**

**ಯದ್ಯಪಿ ಏಕವಚನ-ಚಶಬ್ದಯೋಃ ಸ್ವಾರಸ್ಯಾನುರೋಧೇನ ಪೂರ್ವೋಕ್ತ ಬಹುವಚನಾಂತವಾಕ್ಯಂ ಸಂಸಾರಿಪರಮ್ । ಉತ್ತರಮ್ ಏಕವಚ-ನಾಂತೋಪೇತವಾಕ್ಯಂ ಮುಕ್ತಪರಮ್ ಇತಿ ಭಿನ್ನವಿಷಯಮ್ ಇತಿ ವ್ಯಾಖ್ಯಾನಂ ಸ್ವರಸಮ್ । ತಥೈವ ಜ್ಞಾನಪಾದೇ ಸುಧಾನುವ್ಯಾಖ್ಯಾನಯೋಃ, ಬೃಹದ್‌ಭಾಷ್ಯೇ ಚ "ಅಮುಕ್ತಾದಮುಕ್ತಸ್ಯ ಮುಕ್ತಾನ್ಮುಕ್ತಸ್ಯ ತಾರತಮ್ಯ-ಮಾಹ" ಇತ್ಯುಕ್ತಮ್ । ತಥಾಪಿ ಪರೈಃ ಸರ್ವಂ ಅಮುಕ್ತವಿಷಯತಯೈವ ವ್ಯಾಖ್ಯಾತಮ್ ಇತಿ ತದ್ ವ್ಯುದಾಸಾಯ ಏಕ ವಿಷಯತ್ವೇಽಪಿ ಮುಕ್ತಪರತ್ವ-ಮೇವ ಯುಕ್ತಮ್ । ತಲ್ಲಿಂಗಾನಾಂ ಶ್ರೋತ್ರಿಯತ್ವ ಅಕಾಮ ಹತತ್ವಾದೀನಾಂ ಶ್ರವಣಾತ್ ಇತಿ ಅಭ್ಯುಪೇತ್ಯವಾದೇನ ಇತಿ ಸುಧಾಯಾಮೇವ ಉಕ್ತಮ್ ಅಸ್ಯ ತಾತ್ಪರ್ಯಮ್ ।**

ಉಪನಿಷತ್ತಿನಲ್ಲಿರುವ ಶ್ರೋತ್ರಿಯಸ್ಯ ಅಕಾಮಹತಸ್ಯ ಎಂಬ ಎರಡು ಶಬ್ದಗಳು ಏಕವಚನದಲ್ಲಿ ಇವೆ. ಅವೆರಡನ್ನೂ ಬಹುವಚನಾಂತಗಳನ್ನಾಗಿ ಮಾಡಿಕೊಂಡು ಹಿಂದಿನ ಮಂತ್ರದಲ್ಲಿ ಇರುವ 'ಮನುಷ್ಯಗಂಧರ್ವಾಣಾಂ' ಎಂಬ ಶಬ್ದದೊಂದಿಗೆ ಅನ್ವಯ ಮಾಡಿಕೊಳ್ಳಬೇಕು. (ಈ ಮಂತ್ರದಲ್ಲಿರುವ ಶಬ್ದದೊಂದಿಗೆ ಅಲ್ಲ)

ವಸ್ತುತಃ ಈ ಎರಡು ಶಬ್ದಗಳಲ್ಲಿ ಏಕವಚನ ಪ್ರಯೋಗವಿರುವುದರಿಂದ ಹಾಗೂ 'ಚ' ಎಂಬ ಶಬ್ದವೂ ಇವುಗಳ ಜೊತೆಯಲ್ಲಿ ಇರುವುದರಿಂದ ಹಿಂದಿನ ಮಂತ್ರ ಮತ್ತು ಈ ಮಂತ್ರದಲ್ಲಿ ಹೇಳುವ ವಿಷಯಗಳು ಬೇರೆ ಬೇರೆ ಎಂದೇ ತಿಳಿಯುತ್ತದೆ. ಹಿಂದಿನ ಮಂತ್ರದಲ್ಲಿ ಇನ್ನೂ ಮೋಕ್ಷಕ್ಕೆ ಹೋಗದ, ಸಂಸಾರದಲ್ಲಿರುವ ದೇವಗಂಧರ್ವರು, ಮನುಷ್ಯೋತ್ತಮರು ಇವರಲ್ಲಿರುವ ಆನಂದ ತಾರತಮ್ಯವನ್ನು ಹೇಳಲಾಗಿದೆ; ಈ ಮಂತ್ರದಲ್ಲಿ ಅವರೇ ಮೋಕ್ಷಕ್ಕೆ ಹೋದಾಗ ಅವರಲ್ಲಿರುವ ಆನಂದ ತಾರತಮ್ಯವನ್ನು ಹೇಳಲಾಗಿದೆ. ಹೀಗೆ ಅರ್ಥಮಾಡುವುದೇ ಉಚಿತವೆನಿಸುತ್ತದೆ. ಹೊರತು, ಈಗ ಮಾಡಿರುವಂತೆ ಏಕವಚನವನ್ನು ಬಹುವಚನವನ್ನಾಗಿ ಮಾಡಿಕೊಂಡು ಒಂದೇ ವಾಕ್ಯವನ್ನಾಗಿ ಪರಿಗಣಿಸಿ ಮುಕ್ತರಲ್ಲೇ ಆನಂದತಾರತಮ್ಯವನ್ನು ಹೇಳುವಂತೆ ವ್ಯಾಖ್ಯಾನ ಮಾಡಬೇಕಾಗಿಲ್ಲ. ಆದ್ದರಿಂದಲೇ ಜ್ಞಾನಪಾದದ ಶ್ರೀಮನ್ನ್ಯಾಯಸುಧಾ, ಅನುವ್ಯಾಖ್ಯಾನಗಳಲ್ಲಿ ಮತ್ತು ಬೃಹದಾರಣ್ಯಕ ಭಾಷ್ಯದಲ್ಲೂ ಈ ಸಂದರ್ಭವನ್ನು ಇದೇ ರೀತಿಯಾಗಿ ಮುಕ್ತ ಅಮುಕ್ತರಿಗೆ ಸಂಬಂಧಿಸಿದಂತೆ ವ್ಯಾಖ್ಯಾನಿಸಲಾಗಿದೆ.

ಆದರೂ ಈ ಪ್ರಕರಣವನ್ನು ಪ್ರಕೃತ ತೈತ್ತಿರೀಯಭಾಷ್ಯದಲ್ಲಿ ಆಚಾರ್ಯರು ಕೇವಲ ಮುಕ್ತಪರವಾಗಿ ವ್ಯಾಖ್ಯಾನಿಸಿದ್ದಾರೆ. ಅದಕ್ಕೆ ಕಾರಣ, ಅದ್ವೈತ ಭಾಷ್ಯದಲ್ಲಿ ಈ ಪ್ರಕರಣವನ್ನು ಕೇವಲ ಅಮುಕ್ತ ಪರವಾಗಿ ವ್ಯಾಖ್ಯಾನಿಸಲಾಗಿದೆ. ಅದು ಸರಿಯಲ್ಲ ಎಂದು ತಿಳಿಸಲು, ಇಲ್ಲಿ ಕೇವಲ ಮುಕ್ತಪರವಾದ ಅರ್ಥವು ಕಾಣುತ್ತಿದೆ. ಅದನ್ನು ಅಮುಕ್ತರಿಗೆ ಮಾತ್ರ ಸಂಬಂಧಿಸಿದಂತೆ ವ್ಯಾಖ್ಯಾನಿಸಬಾರದು. ಹೀಗೆ ಏಕಮಾತ್ರಪರವಾಗಿ ವ್ಯಾಖ್ಯಾನಿಸುವುದಾದರೂ ಕೇವಲ ಮುಕ್ತಪರವಾಗಿ ವ್ಯಾಖ್ಯಾನಿಸಬಹುದು. ಏಕೆಂದರೆ, ಮುಕ್ತರಲ್ಲೇ ಇರುವ ಶ್ರೋತ್ರಿಯತ್ವ-ಅಕಾಮಹತತ್ವಧರ್ಮಗಳನ್ನು ಈ ಪ್ರಕರಣದಲ್ಲಿ ಹೇಳಲಾಗಿದೆ ಎಂದು ಇಲ್ಲಿ ವ್ಯಾಖ್ಯಾನಿಸಲಾಗಿದೆ. ಇದು ಕೇವಲ ಅಭ್ಯುಪಗಮವಾದ. ವಸ್ತುತಃ ಈ ಪ್ರಕರಣ ಮುಕ್ತಾಮುಕ್ತಪರವಾಗಿದೆ.

**ವಿವರಣೆ** — ಬ್ರಹ್ಮಸೂತ್ರದ ಮೂರನೆಯ ಅಧ್ಯಾಯದ ನಾಲ್ಕನೆಯ ಪಾದದ ಅನುವ್ಯಾಖ್ಯಾನದಲ್ಲಿ ತೈತ್ತಿರೀಯ ಉಪನಿಷತ್ತಿನ ಈ ಪ್ರಕರಣವನ್ನು ಹೀಗೆ ವ್ಯಾಖ್ಯಾನ ಮಾಡಲಾಗಿದೆ.

ತಸ್ಮಾತ್ ಅಮುಕ್ತಸುಖಗಂ ತಾರತಮ್ಯಂ ಪೃಥಕ್ ಪೃಥಕ್ ।
ಉಕ್ತ್ವಾ ಯಶ್ಚೇತಿ ಮುಕ್ತಾನಾಂ ತಾರತಮ್ಯಂ ಸುಖೇ ಶ್ರುತಿಃ ॥
ಆಹೇತಿ ಪೇಶಲಂ ತಚ್ಚ ಚಶಬ್ದಾದೇವ ಗಮ್ಯತೇ ॥

ತೈತ್ತಿರೀಯ ಶ್ರುತಿಯಲ್ಲಿ ಅಮುಕ್ತಸುಖದಲ್ಲಿ ತಾರತಮ್ಯವನ್ನು 'ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್' ಎಂದು ಹೇಳಿ ಅದೇ ತಾರತಮ್ಯವನ್ನು 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂದು ಮುಕ್ತರಿಗೆ ಹೇಳಲಾಗಿದೆ. ಹೀಗೆ ಎರಡೆರಡು ತಾರತಮ್ಯಗಳನ್ನು ಹೇಳಲಾಗಿದೆ ಎನ್ನಲು ಇಲ್ಲಿರುವ ಚ ಶಬ್ದವೇ ಸೂಚಕ. ಇದು ಅನುವ್ಯಾಖ್ಯಾನದ ವಿವರಣೆ.

ಬೃಹದಾರಣ್ಯಕೋಪನಿಷತ್ತಿನ ನಾಲ್ಕನೆಯ ಅಧ್ಯಾಯದಲ್ಲೂ ಇದೇ ವಿಧದ ತಾರತಮ್ಯವಚನ ಇದೆ. ಅದನ್ನು ಆಚಾರ್ಯರು ಕೇವಲ ಮುಕ್ತರಿಗೆ ಸಂಬಂಧ ಪಟ್ಟಂತೆ ವ್ಯಾಖ್ಯಾನಿಸಿದ್ದಾರೆ.

ಅನ್ಯೇಭ್ಯಸ್ತು ವಿಮುಕ್ತೇಭ್ಯಃ ಆನಂದಶ್ಚಕ್ರವರ್ತಿನಾಮ್ ।
ಮುಕ್ತಾನಾಂ ಹಿ ಶತೋದ್ರಿಕ್ತಃ ಪಿತೃಣಾಂ ತೇಭ್ಯ ಏವ ಚ ॥

ಅದರಂತೆ ಪ್ರಕೃತ ತೈತ್ತಿರೀಯ ಉಪನಿಷತ್ತಿನ ಈ ಭಾಗವನ್ನು ಕೇವಲ ಮುಕ್ತರಿಗೆ ಆನಂದ ತಾರತಮ್ಯವನ್ನು ನಿರೂಪಿಸುವಂತೆ ಅನ್ವಯಿಸಲಾಗಿದೆ.

**ಯೇ ಸಾಕ್ಷಾತ್ ದೇವ ಪ್ರೇಷ್ಯಾಃ ತೇ ದೇವಗಂಧರ್ವಾಃ । ತೇಷಾಂ ಮನುಷ್ಯಗಂಧರ್ವಾಪೇಕ್ಷಯಾ ಶತಗುಣೋತ್ಕೃಷ್ಟಃ ಆನಂದಃ ಇತ್ಯರ್ಥಃ । ಏವಂ ಅಗ್ರೇಽಪಿ ಪೂರ್ವಪೂರ್ವೇಭ್ಯಃ ಉತ್ತರೋತ್ತರಂ ಶತಗುಣೋತ್ಕರ್ಷಃ ಧ್ಯೇಯಃ ।**

ಯಾವ ಗಂಧರ್ವರು ನೇರವಾಗಿ ದೇವತೆಗಳ ಪರಿಚಾರಕರಾಗಿರುವರೋ ಅವರು ದೇವ ಗಂಧರ್ವರು. ಈ ದೇವಗಂಧರ್ವರ ಮೂಲಕ ದೇವತೆಗಳ ಸೇವಕರಾಗಿರುವವರು ಮನುಷ್ಯಗಂಧರ್ವರು. ಮನುಷ್ಯಗಂಧರ್ವರಿಗಿಂತ ದೇವಗಂಧರ್ವರಿಗೆ ಮೋಕ್ಷದಲ್ಲಿ ನೂರ್ಮಡಿ ಹೆಚ್ಚು ಆನಂದ ಲಭಿಸುತ್ತದೆ. ಇದರಂತೆ ಮುಂದೆಯೂ ಹಿಂದಿನವರಿಗಿಂತ ಮುಂದಿನವರಿಗೆ ಹೆಚ್ಚು ಹೆಚ್ಚು ಆನಂದವೆಂದು ತಿಳಿಯಬೇಕು.

**ಚಿರಲೋಕೇತಿ ॥ ಚಿರಕಾಲೀನೋ ಲೋಕಃ, ಸ ಏವ ಲೋಕಃ, ಯೇಷಾಂ ತೇ - ಚಿರಲೋಕಲೋಕಾಃ । ತೇಷಾಂ ಪಿತೃಣಾಂ ಇತ್ಯರ್ಥಃ ।**

**ದೇವೇಷು ಅನಾಖ್ಯಾತಾಃ ಅಕಥಿತಾಃ ಯೇ ದೇವತಾಃ ದೇವ ಕುಲೇ ಜಾತಾಃ, ತೇ ಅಜಾನಜದೇವಾಃ, ತೇಷಾಂ ಇತ್ಯರ್ಥಃ ॥ ೧೮ ॥**

ಅನೇಕ ಪಿತೃದೇವತೆಗಳಿದ್ದಾರೆ. ಅವರಲ್ಲಿ ಅರ್ಯಮಾದಿ ಪಿತೃಗಣಗಳು ವಾಸಮಾಡುವ ಲೋಕ ಚಿರಲೋಕ. ಆ ಲೋಕದಲ್ಲಿರುವ ಪಿತೃಗಳಿಗೆ ಚಿರಪಿತೃಗಳೆಂದು ಹೆಸರು. ಅವರಿಗೆ ದೇವಗಂಧರ್ವರಿಗಿಂತಲೂ ನೂರುಪಟ್ಟು ಹೆಚ್ಚು ಆನಂದ.

ದೇವತಾ ಲೋಕದಲ್ಲಿದ್ದು ಇಂದ್ರ, ಯಮ ಇವರಂತೆ ತತ್ತ್ವಾಭಿಮಾನಿ ದೇವತೆಗಳ ಗುಂಪಿನಲ್ಲಿ ಹೆಸರಿಸಲ್ಪಡದ ಅನೇಕ ದೇವತೆಗಳಿದ್ದಾರೆ. ಅವರು ಆಜಾನಜದೇವತೆಗಳು. ಅವರಿಗೆ ಚಿರಪಿತೃಗಳಿಗಿಂತ ನೂರ್ಮಡಿ ಹೆಚ್ಚಿನ ಆನಂದ. ॥ ೧೮ ॥

**ಯೇ ಕರ್ಮಣಾ ದೇವಾನಪಿ ಯಂತಿ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನಂದಾಃ । ಸ ಏಕೋ ದೇವಾನಾಮಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ದೇವಾನಾಮಾನಂದಾಃ । ಸ ಏಕ ಇಂದ್ರಸ್ಯಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಮಿಂದ್ರಸ್ಯಾನಂದಾಃ । ಸ ಏಕೋ ಬೃಹಸ್ಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಬೃಹಸ್ಪತೇರಾನಂದಾಃ ॥ ೧೯ ॥**

ಯಜ್ಞ ಯಾಗಾದಿ ಕರ್ಮಗಳಿಂದ ದೇವತ್ವವನ್ನು ಪಡೆಯುವ ಬಲಿ ಮುಂತಾದವರು ಕರ್ಮಜದೇವತೆಗಳು. ಅಂತಹ ಕರ್ಮಜ ದೇವತೆಗಳು ಶ್ರವಣಫಲವನ್ನು ಪಡೆದು ಪೂರ್ಣಕಾಮರಾಗಿರುವ ಮೋಕ್ಷದಲ್ಲಿ ಅವರಿಗೆ ಆಜಾನಜದೇವತೆಗಳಿಗಿಂತಲೂ ನೂರುಪಟ್ಟು ಹೆಚ್ಚು ಆನಂದ. ಅವರಿಗಿಂತ ನೂರುಪಟ್ಟು ಹೆಚ್ಚು ಆನಂದ ಸೃಷ್ಟಿಯ ಆದಿಯಿಂದಲೂ ದೇವತೆಗಳಾಗಿರುವವರಿಗೆ.

ಅವರು ಶ್ರೋತ್ರಿಯರಾಗಿ ಆಪ್ತಕಾಮರಾಗುವ ಮುಕ್ತ್ಯವಸ್ಥೆಯಲ್ಲಿ ಈ ಆನಂದ ಲಭಿಸುತ್ತದೆ. ಇಂತಹ ದೇವತೆಗಳಿಗಿಂತ ನೂರುಪಟ್ಟು ಹೆಚ್ಚಿನ ಆನಂದ ಶ್ರೋತ್ರಿಯನಾದ ಪೂರ್ಣಕಾಮನಾದ ಮುಕ್ತ ದಕ್ಷಪ್ರಜಾಪತಿಗೆ. ಅವನ ನೂರುಪಟ್ಟು ಹೆಚ್ಚಿನ ಆನಂದ ಶ್ರೋತ್ರಿಯನಾದ ಆಪ್ತಕಾಮನಾದ ದೇವೇಂದ್ರನಿಗೆ ಮೋಕ್ಷದಲ್ಲಿ ಲಭಿಸುತ್ತದೆ.

**ಯೇ ಬಲ್ಯಾದಯಃ, ಕರ್ಮಣಾ ಮಧ್ಯೇ ದೇವಾನ್ = ದೇವತ್ವಂ ಅಪಿಯಂತಿ ತೇ ಕರ್ಮದೇವಾಃ ಇತ್ಯರ್ಥಃ । ದೇವಾನಾಮಿತಿ ॥ ಸೃಷ್ಟ್ಯಾದೌ ದೇವತ್ವಂ ಪ್ರಾಪ್ತಾನಾಂ ತತ್ತ್ವಾಭಿಮಾನಿದೇವಾನಾಂ ಇತ್ಯರ್ಥಃ ।**

**ಇಂದ್ರಸ್ಯೇತಿ ॥ ಇಂದುಂ ರಾವಯತಿ - ಇತಿ ವ್ಯುತ್ಪತ್ತ್ಯಾ ದಕ್ಷ ಪ್ರಜೇಶ್ವರಸ್ಯ ಇತ್ಯರ್ಥಃ । ಬೃಹಸ್ಪತೇರಿತಿ ॥ ಮಹೇಂದ್ರತ್ವ ಹೇತುನಾ ಬೃಹಂಶ್ಚಾಸೌ ಪತಿಶ್ಚೇತಿ ಬೃಹಸ್ಪತಿಶಬ್ದಿತ ಪುರಂದರಸ್ಯೇತ್ಯರ್ಥಃ ॥ ೧೯ ॥**

'ಯೇ ಕರ್ಮಣಾ' ಎಂಬ ಉಪನಿಷತ್ತಿನಲ್ಲಿ ಯೇ ಎಂದರೆ ಯಾರು, ಅರ್ಥಾತ್ ಯಾವ ಬಲಿ ಮುಂತಾದವರು ಯಾಗಾದಿ ಸತ್ಕರ್ಮದಿಂದ ಸೃಷ್ಟಿಯ ಮಧ್ಯಕಾಲದಲ್ಲಿ ದೇವಾನ್ ಎಂದರೆ ದೇವತ್ವವನ್ನು ಹೊಂದಿರುವರೋ ಅಂತಹವರು ಕರ್ಮದೇವತೆಗಳು ಎಂದು ಅರ್ಥ.

ಉಪನಿಷತ್ತಿನಲ್ಲಿ ದೇವಾನಾಂ ಎಂದರೆ ಸೃಷ್ಟಿಯ ಆರಂಭದಿಂದಲೂ ದೇವತೆಗಳಾಗಿರುವ ತತ್ತ್ವಾಭಿಮಾನಿ ದೇವತೆಗಳಿಗೆ ಎಂದರ್ಥ.

'ಇಂದ್ರಸ್ಯ' ಎಂದರೆ ದೇವೇಂದ್ರನಿಗೆ ಎಂದು ಅರ್ಥವಲ್ಲ, ದಕ್ಷಪ್ರಜಾಪತಿಗೆ ಎಂದು ಅರ್ಥ. ಇಂದುಂ ರಾವಯತಿ ಇತಿ ಇಂದ್ರಃ. ಚಂದ್ರನನ್ನು ಬಳಲಿಸಿದವನು - ಇಂದ್ರ. ದಕ್ಷಶಾಪದಿಂದ ಚಂದ್ರ ಕಳೆಗುಂದಿದ. ಹೀಗೆ ಚಂದ್ರನಿಗೆ ಪೀಡೆ ನೀಡಿದ ಕಾರಣ ಇಂದ್ರ ಎಂದರೆ ದಕ್ಷ ಪ್ರಜಾಪತಿ.

ಅದರಂತೆ, ಬೃಹಸ್ಪತಿ ಎಂದರೆ ಇಂದ್ರ. ಬೃಹಂಶ್ಚಾಸೌ ಪತಿಶ್ಚ - ಬೃಹಸ್ಪತಿಃ, ಶ್ರೇಷ್ಠನಾದ ರಾಜ. ದೇವತೆಗಳ ರಾಜ ಇಂದ್ರ, ಸ್ವರ್ಗದ ಒಡೆಯ ಪುರಂದರ.

**ವಿವರಣೆ** - ದೇವತೆಗಳು ಮೂರು ವಿಧರು. ಕೆಲವರು ಸೃಷ್ಟಿಯ ಆರಂಭದಿಂದಲೂ ದಿತಿಯ ಮಕ್ಕಳಾಗಿ ಹುಟ್ಟಿ ದೇವತೆಗಳೆನಿಸಿರುವವರು.

ಅಂತಹವರು ಜ್ಞಾನಕರ್ಮೇಂದ್ರಿಯಗಳಿಗೋ, ಪಂಚಭೂತಗಳಿಗೋ ಅಭಿಮಾನಿಗಳಾಗಿದ್ದು ತತ್ತ್ವಾಭಿಮಾನಿದೇವತೆಗಳು. ಉದಾಹರಣೆಗೆ- ಇಂದ್ರ ಅಗ್ನ್ಯಾದಿಗಳು. ತತ್ತ್ವಾಭಿಮಾನಿಗಳಲ್ಲದ ದೇವತೆಗಳು ಅಜಾನಜದೇವತೆಗಳು. ಅನಾಖ್ಯಾತದೇವತೆಗಳೆಂದರೂ ಇವರೆ. ಇವರಿಬ್ಬರಲ್ಲದೆ ತಮ್ಮ ಸಾಧನೆಯಿಂದ ದೇವತಾಪದವಿಗೆ ಬಂದವರು ಕರ್ಮಜ ದೇವತೆಗಳು.

ಇವರಲ್ಲಿ ಆಜಾನಜದೇವತೆಗಳಿಗಿಂತ ಕರ್ಮಜದೇವತೆಗಳು ಶ್ರೇಷ್ಠರು. ಅವರಿಗಿಂತ ತತ್ತ್ವಾಭಿಮಾನಿದೇವತೆಗಳು ಶ್ರೇಷ್ಠರು. ॥ ೧೯ ॥

**ಸ ಏಕಃ ಪ್ರಜಾಪತೇರಾನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ । ತೇ ಯೇ ಶತಂ ಪ್ರಜಾಪತೇರಾನಂದಾಃ । ಸ ಏಕೋ ಬ್ರಹ್ಮಣ ಆನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ ॥ ೨೦ ॥**

ಇಂದ್ರನ ನೂರು ಪಟ್ಟು ಆನಂದ ರುದ್ರದೇವನಿಗೆ ಇದೆ. ಆ ರುದ್ರದೇವ ಶ್ರೋತ್ರಿಯನಾಗಿದ್ದು ಆಪ್ತಕಾಮನಾಗಿರಬೇಕು. ಅಂದರೆ ಮುಕ್ತನಾಗಿರಬೇಕು. ಈ ರುದ್ರನ ನೂರುಪಟ್ಟು ಆನಂದವು ಶ್ರೋತ್ರಿಯರಾದ ಪೂರ್ಣಕಾಮರಾದ ಚತುರ್ಮುಖ ಬ್ರಹ್ಮದೇವರಿಗಿದೆ.

**ಪ್ರಜಾಪತೇರಿತಿ ॥ ಪ್ರಜನನ-ಈಶಿತೃತ್ವ ಹೇತುನಾ ಪ್ರಜಾಪತಿನಾಮ್ನಃ ರುದ್ರಸ್ಯ ಇತ್ಯರ್ಥಃ । ಬ್ರಹ್ಮಣ ಇತಿ ॥ ಚತುರ್ಮುಖಸ್ಯ ಇತ್ಯರ್ಥಃ ।**

**ಅತ್ರ ಆನಂದ ನೀಚೋಚ್ಚತೋಕ್ತಿಃ ಉಪಲಕ್ಷಣಮ್ । ಜ್ಞಾನ-ಭಕ್ತಿ-ಬಲಾದೌ ಅಪಿ ಜ್ಞೇಯಮ್ ॥ ೨೦ ॥**

ಪ್ರಜಾಪತಿ ಎಂದರೆ ಉತ್ಪತ್ತಿಗೆ ನಿಯಾಮಕನಾದ ರುದ್ರ. ಬ್ರಹ್ಮನೆಂದರೆ ಚತುರ್ಮುಖ ಬ್ರಹ್ಮದೇವರು.

ಈ ಪ್ರಕರಣದಲ್ಲಿ ಆನಂದದಲ್ಲಿ ಮಾತ್ರ ತಾರತಮ್ಯವನ್ನು ಹೇಳಿದ್ದರೂ ಅದು ಉಪಲಕ್ಷಣ. ಆನಂದದಲ್ಲಿ ತಾರತಮ್ಯವಿದ್ದರೆ ಅದಕ್ಕೆ ಕಾರಣವಾದ ಜ್ಞಾನ-ಭಕ್ತಿ-ಬಲಗಳಲ್ಲೂ ತಾರತಮ್ಯವಿದೆ ಎಂದು ತಿಳಿಯಬೇಕು. ॥ ೨೦ ॥

**ಏವಂ ಲಕ್ಷಣವಾಕ್ಯಸ್ಥ ಸತ್ಯಾದಿಪದತ್ರಯಾರ್ಥಂ ''ಆತ್ಮನ ಆಕಾಶಃ'' ಇತ್ಯಾದಿ ಪ್ರಕರಣಷಟ್ಕೇನ ವಿವೃತ್ಯ ''ಯೋ ವೇದ ನಿಹಿತಂ ಗುಹಾಯಾಂ'' ಇತ್ಯುಕ್ತವೇದನಂ ಕಥಮ್ ? ಇತ್ಯತಃ ನ ಜೀವೈಕ್ಯೇನ, ಕಿಂತು ತತೋ ಭೇದೇನ ಇತಿ 'ಅಸದ್ ಬ್ರಹ್ಮೇತಿ' ಶ್ಲೋಕೇನ ಉಕ್ತ್ವಾ 'ಅಥಾತೋಽನುಪ್ರಶ್ನಾಃ' ಇತ್ಯಾದಿನಾ ''ಸೋಽಶ್ನುತೇ'' ಇತ್ಯುಕ್ತಃ ಜ್ಞಾನಿನಃ ಸರ್ವಕಾಮಭೋಗಃ ಸರ್ವಜ್ಞಾನಿನಾಂ ಸಮಾನಃ, ಉತ ಕಸ್ಯಚಿದೇವ ಸಮ್ಯಕ್ ? ಇತಿ ಕೃತಪ್ರಶ್ನಸ್ಯ ''ಸೈಷಾನಂದಸ್ಯ'' ಇತ್ಯಾದಿನಾ ಉತ್ತರಂ ಉಕ್ತ್ವಾ, ಅಥೇದಾನೀಂ ಬ್ರಹ್ಮಜ್ಞಾನಂ ನ ತದ್ರೂಪಾದೌ ಬೇದೇನ ಇತಿ ''ಉದರಮಂತರಂ ಕುರುತೇ'' ಇತ್ಯಾದಿನಾ ಅಭಿಹಿತೇ, ಕಥಂ ತರ್ಹಿ? ಇತ್ಯತಃ ಸರ್ವತ್ರಸ್ಥಿತ ಭಗವದ್ರೂಪಾಣಾಂ ಅಭೇದೇನೈವ, ಜೀವಾದಿಭ್ಯೋ ಭೇದೇನ ಚ ಜ್ಞಾನಂ ಪುಮರ್ಥಹೇತುಃ ನಾನ್ಯಥಾ ಇತಿ ಭಾವೇನ ಆಹ- 'ಸ ಯಶ್ಚಾಯಂ' ಇತಿ।**

ಇದುವರೆಗೆ ಹೇಳಿದ ವಿಷಯಗಳು ಇಷ್ಟು - ಮೊದಲು ''ಸತ್ಯಂ ಜ್ಞಾನಂ ಅನಂತಂ'' ಎಂಬ ಬ್ರಹ್ಮನ ಲಕ್ಷಣವನ್ನು ಹೇಳುವ ವಾಕ್ಯದಲ್ಲಿರುವ ಸತ್ಯ, ಜ್ಞಾನ, ಅನಂತ ಈ ಮೂರು ಪದಗಳ ಅರ್ಥವನ್ನು ''ಆತ್ಮನಃ ಆಕಾಶಃ ಸಂಭೂತಃ'' ಎಂಬ ಪ್ರಕರಣದಿಂದ ಆನಂದಮಯಪ್ರಕರಣದವರೆಗಿನ ಒಟ್ಟು ಆರು ಪ್ರಕರಣಗಳಲ್ಲಿ ವಿವರಿಸಲಾಯಿತು.

ಮುಂದೆ, 'ಯೋ ವೇದ ನಿಹಿತಂ ಗುಹಾಯಾಂ' ಎಂದು ಪ್ರಾರಂಭದಲ್ಲಿ ಹೇಳಿರುವ ಬ್ರಹ್ಮಜ್ಞಾನ ಯಾವ ರೀತಿಯಾದುದು ? ಎನ್ನುವ ಜಿಜ್ಞಾಸೆ ಬಂತು. ಅದಕ್ಕೆ ಉತ್ತರವಾಗಿ, ''ಅಸದ್ ಬ್ರಹ್ಮೇತಿ ವೇದ ಚೇತ್'' ಎಂಬ ಪ್ರಕರಣದಲ್ಲಿ ಬ್ರಹ್ಮನು ತನ್ನ ರೂಪಗಳಿಗಿಂತ ಭಿನ್ನನಾಗಿದ್ದಾನೆ ಎಂದು ತಿಳಿಯಬಾರದು, ಅವನು ಅಭಿನ್ನನೆಂದೇ ತಿಳಿಯಬೇಕು, ಎನ್ನಲಾಯಿತು.

ಅನಂತರ, ''ಸೋಽಶ್ನುತೇ ಸರ್ವಾನ್ ಕಾಮಾನ್'' ಎಂದು ಪ್ರಾರಂಭದಲ್ಲಿ ಹೇಳಲಾದ ಬ್ರಹ್ಮಾನುಭವ ಎಲ್ಲ ಜ್ಞಾನಿಗಳಿಗೂ ಸಮಾನವೋ ಅಥವಾ ಒಬ್ಬರಿಗೆ ಮಾತ್ರ ವಿಶೇಷವಾಗಿಯೋ? ಎನ್ನುವ ಜಿಜ್ಞಾಸೆಯನ್ನು ''ಅಥಾತೋಽನು ಪ್ರಶ್ನಾಃ'' ಎಂಬಲ್ಲಿ ಮಾಡಲಾಯಿತು. ಅದಕ್ಕೆ ''ಸೈಷಾನಂದಸ್ಯ ಮೀಮಾಂಸಾ ಭವತಿ'' ಎಂಬ ಪ್ರಕರಣದಲ್ಲಿ ಮೋಕ್ಷಾನಂದ ತಾರತಮ್ಯವನ್ನು ಹೇಳುವ ಮೂಲಕ ಉತ್ತರವನ್ನು ವಿಸ್ತೃತವಾಗಿ ಕೊಡಲಾಯಿತು.

ಹಿಂದೆ 'ಉದರ ಮಂತರಂ ಕುರುತೇ'' ಎಂಬಲ್ಲಿ ಬ್ರಹ್ಮನ ರೂಪಗಳಿಗೆ ಪರಸ್ಪರ ಭೇದವನ್ನು ತಿಳಿಯಬಾರದು, ಎಂದು ಹೇಳಲಾಯಿತು. ಇದೀಗ, ಮುಂದಿನ ಪ್ರಕರಣದಲ್ಲಿ, ಭಗವದ್ರೂಪಗಳಿಗೆ ಪಸ್ಪರ ಅಭೇದವನ್ನೂ, ಜೀವನಿಗಿಂತ ಭೇದವನ್ನೂ ತಿಳಿಯಬೇಕು ಎಂದು ನಿರೂಪಿಸಲಾಗಿದೆ.

**ಸಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯ-ಮಾತ್ಮಾನಮುಪಸಂಕ್ರಾಮತಿ । ಏತಂ ಪ್ರಾಣಮಯಮಾತ್ಮಾನ ಮುಪ ಸಂಕ್ರಾಮತಿ । ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ । ಏತಮಾನಂದ-ಮಯಮಾತ್ಮಾನಮುಪಸಂಕ್ರಾಮತಿ ॥ ೨೧ ॥**

ಯಾರ ಅನುಗ್ರಹದಿಂದ ಜೀವಾತ್ಮನು ತನ್ನ ಸ್ವರೂಪಾನಂದವನ್ನು ಅನುಭವಿಸುವನೋ ಅಂತಹ ಪರಮಾತ್ಮನು ಜೀವಾತ್ಮನಲ್ಲಿ ಸನ್ನಿಹಿತನಾಗಿದ್ದಾನೆ. ಅವನೇ ಆದಿತ್ಯಾದಿ ಸಕಲದೇವತೆಗಳ ಒಳಗೂ ಇದ್ದಾನೆ. ಈ ಎಲ್ಲರಲ್ಲೂ ಸನ್ನಿಹಿತನಾದ ಪರಮಾತ್ಮನು ಒಬ್ಬನೇ ಆಗಿದ್ದಾನೆ; ಸ್ವಾತಂತ್ರ್ಯಾದಿ ಸಕಲಗುಣಭರಿತನಾಗಿದ್ದಾನೆ. ಹೀಗೆ ತಿಳಿಯುವ ಯೋಗ್ಯವ್ಯಕ್ತಿಯು, ಈ ಭೌತಿಕ ದೇಹವನ್ನು ತ್ಯಜಿಸಿದ ಮೇಲೆ ಅನ್ನಮಯ ಅನಿರುದ್ಧನನ್ನು ಹೊಂದುತ್ತಾನೆ. ಪ್ರಾಣಮಯ ಪ್ರದ್ಯುಮ್ನನ ಬಳಿಗೆ ಹೋಗುತ್ತಾನೆ. ಮನೋಮಯ ಸಂಕರ್ಷಣನ ಬಳಿಗೆ ಹೋಗುತ್ತಾನೆ. ವಿಜ್ಞಾನಮಯ ವಾಸುದೇವನ ಬಳಿ ಹೋಗುತ್ತಾನೆ. ಆನಂದಮಯ ನಾರಾಯಣನ ಬಳಿ ಹೋಗುತ್ತಾನೆ.

**'ರಸಂ ಹ್ಯೇವಾಯಂ ಲಬ್ಧ್ವಾನಂದೀಭವತಿ' ಇತ್ಯತ್ರ, ಯತ್ ಪ್ರಸಾದಾತ್ ಸ್ವರೂಪಾನಂದಾವಾಪ್ತಿಃ ಬ್ರಹ್ಮಾದೀನಾಂ ಉಕ್ತಾ ಸ ಪ್ರಸಿದ್ಧಃ ಯೋಽಯಂ ಪುರುಷೇ = ಜೀವಸಮೂಹೇ, ಯಶ್ಚಾಸೌ ಆದಿತ್ಯ ಪದೋಪಲಕ್ಷಿತ ದೇವೇಷು ಸ್ಥಿತಃ ಸಃ ಏಕ ಏವ, ಸರ್ವೈಃ ಸ್ವಾತಂತ್ರ್ಯಾದಿಗುಣೈಃ ವಿಶಿಷ್ಟಃ ।**

**ಯಃ ಅಧಿಕಾರೀ ಏವಂವಿತ್ = ಜಾನನ್, ಜೀವಾಂಶ್ಚ ತಾರತಮ್ಯೇನ ವಿತ್, ಸಃ ಅಸ್ಮಾತ್ ಲೋಕಾತ್ ಪ್ರೇತ್ಯ = ತಂ ದೇಹಂ ತ್ಯಕ್ತ್ವಾ ನಿರ್ಗತ್ಯ, ಏತಂ ಅನ್ನಮಯಂ ಆತ್ಮಾನಂ ಅನಿರುದ್ಧಂ, ಉಪಸಂಕ್ರಾಮತಿ = ಪ್ರಾಪ್ನೋತಿ । ಏವಂ ಪ್ರದ್ಯುಮ್ನಾದೀನಿ ಪ್ರಾಣಮಯಾದಿಶಬ್ದಿತಾನ್ಯಪಿ ರೂಪಾಣಿ ಪ್ರಾಪ್ನೋತಿ ಇತ್ಯರ್ಥಃ ॥ ೨೧ ॥**

ಹಿಂದೆ 'ರಸಂ ಹ್ಯೇವಾಯಂ ಲಬ್ಧ್ವಾ ಆನಂದೀಭವತಿ'' ಪರಮಾತ್ಮನನ್ನು ಹೊಂದಿ ಬ್ರಹ್ಮಾದಿದೇವತೆಗಳು ಆನಂದವನ್ನು ಅನುಭವಿಸುತ್ತಾರೆ, ಎಂದು ಹೇಳಲಾಗಿದೆ. ಅಂತಹ ಪರಮಾತ್ಮನು ಸಕಲ ಜೀವಸಮೂಹದ ಒಳಗೆ ಏನಿರುವನೋ, ಯಾವ ಆ ಪರಮಾತ್ಮನು ಆದಿತ್ಯನೇ ಮೊದಲಾದ ದೇವತೆಗಳ ಒಳಗಿರುವನೋ ಅವನೂ ಒಬ್ಬನೇ ಆಗಿದ್ದಾನೆ, ಅವನೇ ಸ್ವಾತಂತ್ರ್ಯಾದಿ ಸಕಲ ಗುಣಗಳಿಂದ ಭರಿತನಾಗಿದ್ದಾನೆ.

ಯೋಗ್ಯನಾದ ಯಾವ ಸಾಧಕನು ಹೀಗೆ ಪರಮಾತ್ಮನ ರೂಪಗಳಿಗೆ ಅಭೇದವನ್ನೂ, ಜೀವರಲ್ಲಿ ತಾರತಮ್ಯವನ್ನೂ ತಿಳಿಯುವನೋ ಅಂತಹವನು ಈ ಭೌತಿಕ ದೇಹವನ್ನು ತ್ಯಜಿಸಿ ಈ ಅನ್ನಮಯ ಆತ್ಮನಾದ ಅನಿರುದ್ಧನ ಬಳಿ ಸೇರುತ್ತಾನೆ. ಅದರಂತೆ ಪ್ರಾಣಮಯಾದಿ ಹೆಸರಿನ ಪ್ರದ್ಯುಮ್ನಾದಿ ರೂಪಗಳನ್ನೂ ಹೊಂದುತ್ತಾನೆ, ಎಂದು ಅರ್ಥ.

**ವಿವರಣೆ** — ಅನ್ನಮಯ ಅನಿರುದ್ಧನು ಪೃಥಿವೀ ಮತ್ತು ಜಲದಲ್ಲಿ ಸನ್ನಿಹಿತನಾಗಿದ್ದಾನೆ. ಪ್ರಾಣಮಯ ಪ್ರದ್ಯುಮ್ನನು ಅಗ್ನ್ಯಾದಿ ಭೂತಗಳಲ್ಲಿ ಇದ್ದಾನೆ. ಮನೋಮಯ ಸಂಕರ್ಷಣನು ಮನ ಆದಿ ಇಂದ್ರಿಯಗಳಲ್ಲಿ ಇದ್ದಾನೆ. ವಿಜ್ಞಾನಮಯ ವಾಸುದೇವನು ಮಹತ್ತತ್ತ್ವದಲ್ಲಿ ಇದ್ದಾನೆ. ಆನಂದಮಯ ನಾರಾಯಣನು ಪ್ರಕೃತಿತತ್ತ್ವದಲ್ಲಿ ಸನ್ನಿಹಿತನಾಗಿದ್ದಾನೆ. ಹೀಗೆ ತತ್ತ್ವಗಳಲ್ಲಿ ಸನ್ನಿಹಿತವಾದ ಈ ಪರಮಾತ್ಮನ ರೂಪಗಳನ್ನು ಹೊಂದಿ ದೇವತೆಗಳು ಮುಕ್ತರಾಗುತ್ತಾರೆ. ಭಾಗವತ ತಾತ್ಪರ್ಯದಲ್ಲಿ ಇದನ್ನು ಆಚಾರ್ಯರು ಹೇಳಿದ್ದಾರೆ—

ಭೂಮ್ಯಬ್‌ಗಮನ್ನನಾಮಾನಂ ಪ್ರಾಣಮಗ್ನ್ಯಾದಿ ಸಂಸ್ಥಿತಮ್ ।
ಮಾನಸಂ ಮನ ಆದಿಸ್ಥಂ ವಿಜ್ಞಾನಂ ಮಹತಿ ಸ್ಥಿತಮ್ ।
ಆನಂದಮವ್ಯಕ್ತಗತಂ ಕ್ರಮಶೋ ಯಾಂತಿ ದೇವತಾಃ ॥

**ಪೂರ್ಣಾನಂದತ್ವೇನಾಪಿ ತಜ್ - ಜ್ಞಾನಮ್ ಆವಶ್ಯಕಮ್ ಆನಂದಮಯ ಪ್ರಾಪ್ತಾವಿತಿ ಭಾವೇನಾಹ - ತದಪ್ಯೇಷ ಇತಿ ॥**

ಸಾಧಕನು ಆನಂದಮಯ ಪರಮಾತ್ಮನನ್ನು ಹೊಂದಬೇಕಾದರೆ ಅವನು ಆನಂದಪೂರ್ಣ ಎನ್ನುವ ಜ್ಞಾನವೂ ಬೇಕು ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಿದ್ದಾರೆ.

**ತದಪ್ಯೇಷ ಶ್ಲೋಕೋ ಭವತಿ ।**

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ ।**

**ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ । ಏತಂ̐ಹ**

**ವಾ ವ ನ ತಪತಿ । ಕಿಮಹಂ̐ ಸಾಧು ನಾಕರವಮ್ । ಕಿಮಹಂ**

**ಪಾಪಮಕರವಮಿತಿ ।**

**ಸ ಯ ಏವಂ ವಿದ್ವಾನೇತೇ ಆತ್ಮಾನಂ̐ ಸ್ಪೃಣುತೇ । ಉಭೇ**

**ಹ್ಯೇವೈಷ ಏತೇ ಆತ್ಮಾನಂ̐ ಸ್ಪೃಣುತೇ । ಯ ಏವಂ ವೇದ ।**

**ಇತ್ಯುಪನಿಷತ್ ॥ ಹರಿಃ ಓಂ ॥ ೨೨ ॥**

ಪರಮಾತ್ಮನು ಆನಂದಮಯನೆಂದು ತಿಳಿದವನಿಗೆ ಮಾತ್ರ ಮೋಕ್ಷಾನುಭವ ಎನ್ನುವ ವಿಷಯದಲ್ಲಿ ಈ ಶ್ಲೋಕವಿದೆ.

ಬ್ರಹ್ಮನ ಆನಂದವನ್ನು ವರ್ಣಿಸಲು ಅಸಾಧ್ಯವಾಗಿ ಮನಸ್ಸು ಮತ್ತು ಮಾತುಗಳು ಮೌನ ತಾಳುತ್ತವೆ. ಹೀಗೆ ಬ್ರಹ್ಮನ ಆನಂದವು ಅಪರಿಮಿತವಾದುದು ಎಂದು ತಿಳಿದವನಿಗೆ ಯಾವುದರಿಂದಲೂ ಭಯವಿಲ್ಲ, ಅವನು ಮುಕ್ತನಾಗುತ್ತಾನೆ. ಇಂತಹ ''ಜ್ಞಾನಿಗೆ ನಾನು ಪುಣ್ಯವನ್ನೇ ಮಾಡಲಿಲ್ಲ, ಪಾಪವನ್ನು ಮಾಡಿದ್ದೇನೆ'' ಎನ್ನುವ ಪಶ್ಚಾತ್ತಾಪದಿಂದಾಗಿ ಎಲ್ಲ ಪೂರ್ವಾರ್ಜಿತ ಪುಣ್ಯಪಾಪಗಳು ಅಂಟುವುದಿಲ್ಲ.

ಅವನ ಪಾಪಗಳು ಶತ್ರುಗಳಿಗೂ, ಪುಣ್ಯಗಳು ಸ್ನೇಹಿತರಿಗೂ ಸೇರುತ್ತವೆ. ಹೀಗೆ ಜ್ಞಾನಿಗಳಿಗೆ ಪುಣ್ಯ-ಪಾಪಗಳ ನಂಟು ಇಲ್ಲ ಎಂದು ತಿಳಿದವನಿಗೂ ಪುಣ್ಯಪಾಪಗಳು ಅಂಟುವುದಿಲ್ಲ.

ಇದುವರೆಗೆ ಹೇಳಿದ ಈ ವಿಷಯಗಳು ರಹಸ್ಯವಾದವುಗಳು.

**ಪೂರ್ಣಾನಂದ ಜ್ಞಾನಿನಃ ಏವ ತತ್‌ಪ್ರಾಪ್ತಿಃ ಇತ್ಯರ್ಥೇ ಶ್ಲೋಕೋಽಪಿ ಅಸ್ತೀತ್ಯರ್ಥಃ ।**

**ಯತೋ = ಯಸ್ಮಾತ್ ಬ್ರಹ್ಮಾನಂದತಃ, ವಾಚಃ = ವಚನಾನಿ ಮನಸಾ ಸಹ ನಿವರ್ತಂತೇ । ಅಪ್ರಾಪ್ಯ = ಸಾಕಲ್ಯೇನ ಅವಿಷಯೀ ಕೃತ್ಯ ।**

**ಬ್ರಹ್ಮಣಃ ಆನಂತ್ಯಹೇತುನಾ ವಾಙ್-ಮನಸಾಗೋಚರಂ ಆನಂದಂ ವಿದ್ವಾನ್ ಕುತಶ್ಚನ ನ ಬಿಭೇತಿ, ಮುಕ್ತೋ ಭವತಿ ಇತ್ಯರ್ಥಃ ।**

ಪರಮಾತ್ಮನು ಪೂರ್ಣಾನಂದ ಎಂದು ತಿಳಿದರೆ ಮಾತ್ರ ಆನಂದಪ್ರಾಪ್ತಿರೂಪ ಮೋಕ್ಷವು ದೊರಕುವುದು ಎಂಬ ವಿಷಯದಲ್ಲಿ (ತದಪಿ) ಈ ಶ್ಲೋಕವೂ ಇದೆ, ಎಂದು ಪ್ರಾರಂಭದ ವಾಕ್ಯದ ಅರ್ಥ.

'ಯತಃ' ಎಂದರೆ ಬ್ರಹ್ಮನ ಯಾವ ಆನಂದದಿಂದ, ವಾಚಃ = ಮಾತುಗಳು ಮನಸ್ಸಿನೊಂದಿಗೆ ಹಿಂದಿರುಗುತ್ತವೆ. ಅಪ್ರಾಪ್ಯ ಎಂದರೆ ಬ್ರಹ್ಮನನ್ನು ಮಾತಿನಿಂದ ಸರ್ವಥಾ ಹೇಳಲಾಗದು ಎಂದರ್ಥವಲ್ಲ. ಅವನನ್ನು ಪೂರ್ಣವಾಗಿ ಹೇಳಲಾಗದು ಎಂದಿಷ್ಟೇ ಅರ್ಥ. ಬ್ರಹ್ಮನ ಆನಂದವು ಮಾತು-ಮನಸ್ಸುಗಳಿಗೆ ಮೀರಿದ್ದು ಎಂದು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ ಅರ್ಥಾತ್ ಮುಕ್ತನಾಗುತ್ತಾನೆ.

**ಜ್ಞಾನಿನೋಽಪಿ ಪೂರ್ವಾರ್ಜಿತ ಪುಣ್ಯಪಾಪರೂಪ ಕರ್ಮ ಸತ್ವಾತ್ ಕಥಂ ಬ್ರಹ್ಮಪ್ರಾಪ್ತಿಃ? ಇತ್ಯತ ಆಹ - ಏತಂ ಹ ವಾವ ನ ತಪತೀತಿ ॥ ಅಹಂ ಕಿಂ ಸಾಧು = ಪುಣ್ಯಂ, ನಾಕರವಂ = ನ ಕೃತವಾನ್, ಪಾಪಂ ವಾ ಕಿಂ ಅಕರವಂ ? ಇತ್ಯೇವಂ ರೂಪೇಣ ಪಶ್ಚಾತ್ತಾಪೇನ, ಏತಂ = ಜ್ಞಾನಿನಂ, ಕರ್ಮ ನ ತಪತಿ । ತಾಪಕರಂ ನ ಭವತಿ ಇತ್ಯರ್ಥಃ । 'ವಾವ' ಇತಿ ಅವಧಾರಣೇ, ನೈವ ಇತಿ । ಅತ ಏವೋಕ್ತಂ ಪೂರ್ವಶ್ಲೋಕೇ — 'ಕುತಶ್ಚನ ನ ಬಿಭೇತಿ' ಇತಿ ।**

**ಕುತೋ ನ ಇತ್ಯತ ಆಹ - ಸ ಯ ಇತಿ ॥ ಯಃ ಆತ್ಮಾನಂ, ಏವಂ = ಉಕ್ತರೀತ್ಯಾ, ವಿದ್ವಾನ್ = ಜಾನನ್ ಆಸ್ತೇ, ಸಃ ಏತೇ = ಪುಣ್ಯಪಾಪೇ, ಸ್ಪೃಣುತೇ = ಜಹಾತಿ, ಪ್ರಿಯಾಪ್ರಿಯೇಷು ನೃಷು ಇತಿ ಶೇಷಃ । "ಸುಹೃದಃ ಸಾಧು ಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ" ಇತ್ಯಾದೇಃ । ತದೇವ ಪುನರಾಹ - ಉಭೇ ಇತಿ ॥ ಯಃ ಆತ್ಮಾನಂ, ಏವಂ = ಅಪರಿಚ್ಛಿನ್ನ-ಆನಂದಾದಿ ಸ್ವರೂಪತ್ವೇನ ವೇದ, ಏಷಃ = ಜ್ಞಾನೀ, ಉಭೇ ಏತೇ = ಪುಣ್ಯಪಾಪೇ, ಸ್ಪೃಣುತೇ = ಜಹಾತಿ । ಹಿ = ಯತಃ ಅತಃ ತಸ್ಯ ಕರ್ಮಕೃತತಾಪಃ ನ ಇತಿ ।**

**ಯದ್ವಾ, ಯ ಏವಂ ವೇದ = ಜ್ಞಾನಿನಃ ಪುಣ್ಯಪಾಪತ್ಯಾಗಾತ್ ತತ್ಕೃತತಾಪಃ ನಾಸ್ತಿ ಇತಿ ವೇದ, ಏಷೋಽಪಿ ಪುಣ್ಯಪಾಪೇ, ಆತ್ಮಾನಂ = ಆತ್ಮನಃ, ಸ್ಪೃಣುತೇ = ಜಹಾತಿ ಇತಿ ।**

**ಉಪಸಂಹರತಿ - ಇತ್ಯುಪನಿಷತ್ = ರಹಸ್ಯಮ್ ಉಕ್ತಂ ಇತಿ ॥ ೨೨ ॥**

**ಇತಿ ಬ್ರಹ್ಮವಲ್ಲ್ಯರ್ಥ ಸಂಗ್ರಹಃ**

ಜ್ಞಾನಿಯಾದರೂ ಅವನು ಹಿಂದೆ ಮಾಡಿರುವ ಪುಣ್ಯ-ಪಾಪಗಳು ಇರುವ ಕಾರಣ ಅವನಿಗೆ ಮೋಕ್ಷ ದೊರಕುವುದು ಹೇಗೆ? ಅದಕ್ಕೆ - 'ಏತಂ ಹ ವಾ ವ ನ ತಪತಿ' ಎಂದು ಉತ್ತರ. "ನಾನು ಈ ಹಿಂದೆ ಸಾಧು=ಪುಣ್ಯವನ್ನೇ ನಾಕರವಂ = ಮಾಡಿಲ್ಲ" "ಪಾಪವನ್ನೇ ಮಾಡಿರುವೆನು" ಈ ವಿಧದ ಪಶ್ಚಾತ್ತಾಪದಿಂದಾಗಿ, ಏತಂ = ಈ ಜ್ಞಾನಿಗೆ ಪೂರ್ವಾರ್ಜಿತ ಕರ್ಮವು ತೊಂದರೆಯನ್ನು ಉಂಟು ಮಾಡುವುದಿಲ್ಲ. ಉಪನಿಷತ್ತಿನಲ್ಲಿರುವ 'ವಾವ' ಎಂಬ ಶಬ್ದಕ್ಕೆ 'ಏವ' ಎಂದರ್ಥ. 'ನ' ಶಬ್ದದೊಂದಿಗೆ ಸೇರಿಸಿಕೊಂಡಾಗ 'ನೈವ' ಎಂದಾಗುತ್ತದೆ. (ಪುಣ್ಯವನ್ನು ಮಾಡೇ ಇಲ್ಲ. ಪಾಪವನ್ನೇ ಮಾಡಿರುವೆನು ಎಂದರ್ಥ). ಹೀಗೆ ಜ್ಞಾನಿಗೆ ಪುಣ್ಯ-ಪಾಪಗಳು ಬಾಧಿಸುವುದಿಲ್ಲವಾದ ಕಾರಣದಿಂದಾಗಿಯೇ ಹಿಂದಿನ ಶ್ಲೋಕದಲ್ಲಿ "ನ ಕುತಶ್ಚನ ಬಿಭೇತಿ" ಎಂದು ಹೇಳಲಾಗಿದೆ.

ಜ್ಞಾನಿಯು ತಾನು ಸಂಚಯ ಮಾಡಿದ ಪುಣ್ಯ-ಪಾಪಗಳಿಗೆ ಬೆದರದಿರಲು ಕಾರಣವನ್ನು ಮುಂದಿನ ವಾಕ್ಯ ಹೇಳುತ್ತದೆ - ಯಾರು ಪರಮಾತ್ಮನನ್ನು ಏವಂ = ಹಿಂದೆ ಹೇಳಿದಂತೆ ಆನಂದಪೂರ್ಣ ಎಂದು ವಿದ್ವಾನ್ = ತಿಳಿದಿರುವನೋ ಅಂತಹವನು ತಾನು ಈ ಹಿಂದೆ ಮಾಡಿರುವ ಪುಣ್ಯ-ಪಾಪಗಳನ್ನು ತನ್ನ ಮಿತ್ರ-ಶತ್ರುಗಳಿಗೆ ಬಿಟ್ಟು ಬಿಡುತ್ತಾನೆ. ಇದನ್ನು 'ಸುಹೃದಃ ಸಾಧುಕೃತ್ಯಾಂ

ದ್ವಿಷಂತಃ ಪುಣ್ಯಕೃತ್ಯಾಂ' ಎಂದು ಉಪನಿಷತ್ತು ಹೇಳುತ್ತದೆ. (ಜ್ಞಾನಿಯ ಪುಣ್ಯವು ಮಿತ್ರರಿಗೂ ಪಾಪವು ಶತ್ರುಗಳಿಗೂ ಸೇರುತ್ತದೆ - ಎಂದು ಅದರ ಅರ್ಥ.) ಇದನ್ನೇ ತಾತ್ಪರ್ಯ ದ್ಯೋತನೆಗಾಗಿ ಮತ್ತೊಮ್ಮೆ ಉಪನಿಷತ್ತು ಹೇಳುತ್ತದೆ. ಯಃ, ಯಾರು, ಏವಂ = ಪರಮಾತ್ಮನು ಅಪರಿಮಿತವಾದ ಆನಂದರೂಪ ಎಂದು, ವೇದ = ತಿಳಿಯುವನೋ, ಏಷಃ = ಅಂತಹವನು ತನ್ನ ಪುಣ್ಯಪಾಪಗಳೆರಡನ್ನೂ ಮಿತ್ರ-ಶತ್ರುಗಳಿಗೆ ಬಿಡುತ್ತಾನೆ. ಆದ್ದರಿಂದಾಗಿ ಜ್ಞಾನಿಗೆ ಪೂರ್ವಕರ್ಮಗಳ ಬಗ್ಗೆ ಚಿಂತೆಯೇ ಇಲ್ಲ.

ಅಥವಾ ಎರಡನೆಯ ವಾಕ್ಯಕ್ಕೆ ಹೀಗೂ ಅರ್ಥವನ್ನು ಮಾಡಬಹುದು- ಯ ಏವಂ ವೇದ = ಯಾರು ಜ್ಞಾನಿಗಳಿಗೆ ಪುಣ್ಯಪಾಪಗಳ ನಂಟು ಇಲ್ಲ, ಎಂದು ತಿಳಿಯುವನೋ ಅಂತಹವನೂ ಕೂಡಾ ತನ್ನ ಪಾಪಪುಣ್ಯಗಳನ್ನು ಕಳೆದುಕೊಳ್ಳುತ್ತಾನೆ.

'ಇತಿ ಉಪನಿಷತ್' ಎನ್ನುವುದು ಈ ವಲ್ಲಿಯ ಉಪಸಂಹಾರವಾಕ್ಯ. ಉಪನಿಷತ್ ಎಂದರೆ ರಹಸ್ಯವಾದುದನ್ನು, ಇದುವರೆಗೆ ಹೇಳಲಾಗಿದೆ ಎಂದು ಅರ್ಥ. ॥ ೨೨ ॥

**ಯಯಾ ಶಾಂತ್ಯಾ ಬ್ರಹ್ಮವಿದ್ಯಾ ಉಪಕ್ರಮ್ಯ ಸಮಾಪಿತಾ ತಾಂ ಅಂತೇऽಪಿ ಪ್ರಚಯಸಿದ್ಧ್ಯರ್ಥಂ ಪಠತಿ - ಸಹ ನಾವಿತಿ ॥**

ಯಾವ ಶಾಂತಿ ಮಂತ್ರದಿಂದ ಈ ಬ್ರಹ್ಮವಿದ್ಯೆಯನ್ನು ಆರಂಭಿಸಿ ಇಲ್ಲಿಗೆ ಮುಗಿಸಲಾಗಿದೆಯೋ ಅದೇ ಶಾಂತಿಮಂತ್ರವನ್ನು ಕೊನೆಯಲ್ಲೂ ಪಠಿಸಲಾಗಿದೆ. ಅದರ ಉದ್ದೇಶ, ಈ ಉಪನಿಷತ್ತಿನ ಪ್ರಸಿದ್ಧಿಯಾಗಲೀ ಎನ್ನುವುದು.

**ಸಹ, ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ**

**ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಇಲ್ಲಿಗೆ ತೈತ್ತಿರೀಯೋಪನಿಷತ್ತಿನ ಖಂಡಾರ್ಥದ
ಕನ್ನಡ ಅನುವಾದ ಮುಗಿಯಿತು.

|| ಹರಿಃ ಓಂ ||

# ಭೃಗುವಲ್ಲೀ

**ಬ್ರಹ್ಮವಲ್ಲ್ಯುಕ್ತಾರ್ಥೇ ಸಂವಾದಿತಯಾ ಕಾಂಚನ ಆಖ್ಯಾಯಿಕಾಂ ಪ್ರಾಗುಕ್ತಶಾಂತಿಪಠನಪೂರ್ವಕಂ ಆಹ - 'ಸಹ ನೌ' ಇತ್ಯಾದಿನಾ ||**

ಹಿಂದಿನ ಬ್ರಹ್ಮವಲ್ಲಿಯಲ್ಲಿ ಹೇಳಿರುವ ವಿಷಯಗಳಿಗೆ ಸಂವಾದಿಯಾಗುವ ಒಂದು ಕಥೆಯನ್ನು ಈ ಭೃಗವಲ್ಲಿಯಲ್ಲಿ ಹೇಳಲಾಗಿದೆ. ಅದಕ್ಕೆ ಮೊದಲು ಶಾಂತಿ ಮಂತ್ರವನ್ನು 'ಸಹ ನಾವವತು' ಎಂದು ಪಠಿಸಲಾಗಿದೆ.

**ಸಹ, ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ||**

**ಓಂ ಶಾಂತಿಃ ಶಾಂತಿಃ ಶಾಂತಿಃ ||**

**|| ಶ್ರೀ ಗುರುಭ್ಯೋ ನಮಃ ಹರಿಃ ಓಂ ||**

**ಭೃಗುರ್ವೈ ವಾರುಣಿಃ । ವರುಣಂ ಪಿತರಮುಪ ಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಷ್ ಶ್ರೋತ್ರಂ ಮನೋ ವಾಚಮಿತಿ । ತಂ ಹೋವಾಚ । ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿ ಸಂವಿಶಂತಿ । ತದ್ ವಿಜಿಜ್ಞಾಸಸ್ವ। ತದ್ ಬ್ರಹ್ಮೇತಿ || ೧ ||**

ವರುಣನ ಮಗನಾದ ಭೃಗುವು ತಂದೆಯಾದ ವರುಣನೆಡೆಗೆ ಜ್ಞಾನವನ್ನು ಅರಸಿ ಬಂದ. ''ಸ್ವಾಮಿ, ನನಗೆ ಬ್ರಹ್ಮನ ಕುರಿತು ಉಪದೇಶ ಮಾಡಿ'' ಎಂದನು.

ತನ್ನೆಡೆಗೆ ಬಂದ ಭೃಗುವಿಗೆ ತಂದೆ ವರುಣನು ಹೀಗೆ ಉಪದೇಶಿಸಿದ - ಅನ್ನಮಯ, ಪ್ರಾಣಮಯ, ಚಕ್ಷುರ್ಮಯ, ಶ್ರೋತ್ರಮಯ, ಮನೋಮಯ, ವಾಙ್ಮಯ, ವಿಜ್ಞಾನಮಯ, ಆನಂದಮಯ ಇವು ಎಂಟು ಬ್ರಹ್ಮನ ರೂಪಗಳು ಎಂದು.

ಮತ್ತೆ ಅವನಿಗೆ ಹೇಳಿದ - ಯಾರಿಂದ ಈ ಪ್ರಾಣಿ ಸಂಕುಲದ ಸೃಷ್ಟಿಯಾಗುವುದೋ, ಸೃಷ್ಟಿಯಾದ ಇದು ಜೀವಿಸುತ್ತದೋ, ಪ್ರಲಯಕಾಲದಲ್ಲಿ ಯಾರಲ್ಲಿ ಲಯಗೊಳ್ಳುವುದೋ ಹಾಗೂ ಮೋಕ್ಷಾವಸ್ಥೆಯಲ್ಲಿ ಯಾರಲ್ಲಿ ಸೇರಿಕೊಳ್ಳುವುದೋ ಅಂತಹ, ಗುಣಪೂರ್ಣವಾದುದರಿಂದ ಬ್ರಹ್ಮಶಬ್ದ ವಾಚ್ಯನಾದ ಪರಮಾತ್ಮನ ಶ್ರವಣ - ಮನನ - ಧ್ಯಾನಗಳನ್ನು ಮಾಡು, ಎಂದು.

**ವಾರುಣಿಃ = ವರುಣಸ್ಯಾಪತ್ಯಂ ಭೃಗುಃ, ವರುಣಂ ಪಿತರಂ ಉಪ ಸಸಾರ = ಉಪಸಾದಿತವಾನ್ । ಕಿಮಿತಿ? ಅಧೀಹಿ = ಅಧ್ಯಾಪಯ । ಭಗವಃ = ಭಗವನ್ । ''ಮತುವಸೋಃ ರು ಸಂಬುದ್ಧೌ ಛಂದಸಿ'' ಇತಿ ಭಗವ ಇತಿ ಸಾಧು । ಬ್ರಹ್ಮೋಪದಿಶ ಇತಿ ಉಪಸತ್ತಿಂ ಅಗಾತ್ ಇತ್ಯರ್ಥಃ ।**

ವಾರುಣಿಃ ಎಂದರೆ ವರುಣನ ಮಗನಾದ ಭೃಗುವು, ತಂದೆಯಾದ ವರುಣನ ಉಪಸಸಾರ = ಉಪಸತ್ತಿಯನ್ನು ಮಾಡಿದ. ಅವನ ಬಳಿ ಹೋಗಿ ಬೇಡಿಕೊಂಡ. ಏನೆಂದು? ಅಧೀಹಿ = ಉಪದೇಶ ನೀಡು, ಭಗವಃ = ಸ್ವಾಮಿಯೇ, ಎಂದು. ಭಗನ್ ಎಂದಿರಬೇಕಾದ ಸಂಬೋಧನೆ ವೈದಿಕ ವ್ಯಾಕರಣ ಸೂತ್ರದಂತೆ 'ರು' ಆದೇಶ ಬಂದು 'ಭಗವಃ' ಎಂದಾಗಿದೆ. ಒಟ್ಟಿನಲ್ಲಿ ನನಗೆ ಬ್ರಹ್ಮನ ಕುರಿತು ಉಪದೇಶ ನೀಡು, ಎಂದು ತಂದೆಯ ಬಳಿ ಹೋದ, ಎಂದು ಅರ್ಥ.

**ತಸ್ಮೈ ಭೃಗವೇ ವರುಣಃ, ಏತತ್ = ವಕ್ಷ್ಯಮಾಣಂ ರೂಪಾಷ್ಟಕಂ ಪ್ರೋವಾಚ । ತದಾಹ - ಅನ್ನಮಿತಿ ॥ ಅನ್ನಮಯಂ, ಪ್ರಾಣಮಯಂ, ಚಕ್ಷುರ್ಮಯಂ, ಶ್ರೋತ್ರಮಯಂ, ಮನೋಮಯಂ, ವಾಙ್ಮಯಂ ವಿಜ್ಞಾನಮಯಂ, ಆನಂದಮಯಂ ಚೇತ್ಯೇವಂ ನಾಮ್ಯೈಕದೇಶೇ ನಾಮ–ಗ್ರಹಣನ್ಯಾಯೇನ ಅಯಂ ನಿರ್ದೇಶೋ ಧ್ಯೇಯಃ । ವಿಜ್ಞಾನ–ಮಯಾನಂದಮಯಾವಪಿ ಉಪಲಕ್ಷ್ಯೌ।**

**ಏತೇನ ಬ್ರಹ್ಮವಲ್ಯಾಂ ಪಂಚರೂಪೋಕ್ತಿಃ ಉಪಲಕ್ಷಣಮ್ । ಚಕ್ಷುರ್ಮಯ ಶ್ರೋತ್ರಮಯ ವಾಙ್ಮಯಾಃ ಅಪಿ ಗ್ರಾಹ್ಯಾಃ ಇತ್ಯುಕ್ತಂ ಭವತಿ ।**

ತನ್ನ ಬಳಿಗೆ ಬಂದ ಭೃಗುವಿಗೆ ವರುಣನು, ಏತತ್ = ಮುಂದೆ ಹೇಳಲಿರುವ ಎಂಟು ಭಗವದ್ರೂಪಗಳನ್ನು ಉಪದೇಶ ಮಾಡಿದನು. ಅವುಗಳ ಹೆಸರನ್ನು "ಅನ್ನಂ ಪ್ರಾಣಂ" ಎಂದು ಮುಂತಾಗಿ ಉಪನಿಷತ್ತು ಹೇಳಿದೆ.

ಇಲ್ಲಿರುವ ಅನ್ನ ಶಬ್ದಕ್ಕೆ ಅನ್ನಮಯ ಎಂದೂ ಪ್ರಾಣ ಶಬ್ದಕ್ಕೆ ಪ್ರಾಣಮಯ ಎಂದು ಮುಂತಾಗಿ ಅರ್ಥ ಹೇಳಬೇಕು. ಹೆಸರನ್ನು ಪೂರ್ಣ ಹೇಳುವ ಉದ್ದೇಶ-ವಿರುವಾಗ ಹೆಸರಿನ ಒಂದು ಭಾಗವನ್ನು ಹೇಳುವ ಕ್ರಮವಿದೆ. ಈ ಆರರ ಜೊತೆಗೆ ವಿಜ್ಞಾನಮಯ ಆನಂದಮಯರೂಪಗಳೂ ಸೇರಿದರೆ ಒಟ್ಟು ಎಂಟು-ರೂಪಗಳಾಗುತ್ತವೆ - ಅನ್ನಮಯ ಪ್ರಾಣಮಯ ಚಕ್ಷುರ್ಮಯ ಶ್ರೋತ್ರಮಯ ಮನೋಮಯ ವಾಙ್ಮಯ ವಿಜ್ಞಾನಮಯ ಆನಂದಮಯ, ಎಂದು.

ಇಲ್ಲಿ ಹೇಳಿರುವ ಕಾರಣ ಹಿಂದಿನ ಬ್ರಹ್ಮವಲ್ಲಿಯಲ್ಲೂ ಅನ್ನಮಯಾದಿಗಳ ಜೊತೆಗೆ ಇಲ್ಲಿ ಹೇಳಿರುವ ಚಕ್ಷುರ್ಮಯ ಶ್ರೋತ್ರಮಯ ವಾಙ್ಮಯ ರೂಪಗಳನ್ನೂ ಸೇರಿಸಿಕೊಳ್ಳಬೇಕು.

**ತಥಾಹಿ ಉಕ್ತಂ ವಾಧೂಲಶಾಖಾಯಾಮ್ - ತಸ್ಮಾದ್ವಾ ಏತಸ್ಮಾದ್ ಅನ್ನರಸಮಯಾದ್ ಅನ್ಯೋಂತರ ಆತ್ಮಾ ವಾಙ್ಮಯಃ । ತಸ್ಮಾದ್ವಾ ಏತಸ್ಮಾದ್ ವಾಙ್ಮಯಾದ್ ಅನ್ಯೋಂತರ ಆತ್ಮಾ ಚಕ್ಷುರ್ಮಯಃ । ತಸ್ಮಾದ್ವಾ ಏತಸ್ಮಾದ್ ಚಕ್ಷುರ್ಮಯಾದ್ ಅನ್ಯೋಂತರ ಆತ್ಮಾ ಶ್ರೋತ್ರಮಯಃ । ತಸ್ಮಾತ್ ಪ್ರಾಣಮಯಃ । ತಸ್ಮಾನ್ಮನೋಮಯಃ । ತಸ್ಮಾದ್ವಿಜ್ಞಾನಮಯಃ । ತಸ್ಮಾದಾನಂದಮಯಃ - ಇತಿ ।**

ಯಜುರ್ವೇದದ ವಾಧೂಲಶಾಖೆಯಲ್ಲಿ ಅನ್ನಮಯಾದಿ ಎಂಟೂ ರೂಪಗಳನ್ನೂ ಉಲ್ಲೇಖಿಸಲಾಗಿದೆ- ಈ ಅನ್ನಮಯನಿಗಿಂತ ಭಿನ್ನವಾದ ಅವನೊಳಗಿರುವ ರೂಪ ವಾಙ್ಮಯರೂಪ. ಈ ವಾಙ್ಮಯರೂಪಕ್ಕಿಂತ ಬೇರೆಯಾಗಿ ಅದರೊಳಗಿರುವ ರೂಪ ಚಕ್ಷುರ್ಮಯರೂಪ. ಈ ಚಕ್ಷುರ್ಮಯ ರೂಪಕ್ಕಿಂತ ಭಿನ್ನವಾಗಿ ಅದರೊಳಗಿರುವ ರೂಪ ಶ್ರೋತ್ರಮಯ ರೂಪ. ಅದರೊಳಗಿನ ರೂಪ ಪ್ರಾಣಮಯ. ಅದಕ್ಕಿಂತ ಭಿನ್ನವಾದ ರೂಪ ಮನೋಮಯ. ಅದಕ್ಕಿಂತ ಬೇರೆಯಾದ ರೂಪ ವಿಜ್ಞಾನಮಯ. ಅದಕ್ಕಿಂತ ಭಿನ್ನವಾದುದು ಆನಂದಮಯ, ಎಂದು.

**ಭಗವತಿ ಅನ್ನಮಯಾದೇಃ ನಿರುಕ್ತಿಃ ಪ್ರಾಗ್ವತ್ ಜ್ಞೇಯಾ । ಚಕ್ಷುರ್ಮಯಾದೇಸ್ತು । "ಪೂರ್ಣದರ್ಶನಶಕ್ತಿತ್ವಾತ್ ಚಕ್ಷುರ್ಮಯ ಇತೀರಿತಃ ।" ಇತಿ ಐತರೇಯ ಭಾಷ್ಯೋಕ್ತರೀತ್ಯಾ ಪೂರ್ಣದರ್ಶನಶಕ್ತಿಕತ್ವ ಪೂರ್ಣ ವಕ್ತೃತ್ವ ಶಕ್ತಿಕತ್ವರೂಪಾ ವಾ, "ಚಕ್ಷುಃ, ಸ ಚಷ್ಟೇ ಯದ್ವಿಷ್ಣುಃ" ಇತಿ ಏತದ್ ಭಾಷ್ಯೋಕ್ತದಿಶಾ ವಾ ನಿರುಕ್ತಿಃ ಧ್ಯೇಯಾ ।**

ಅನ್ನಮಯ ಎಂಬ ಶಬ್ದಕ್ಕೆ ಪರಮಾತ್ಮನಲ್ಲಿ ಅನ್ವಯಿಸುವ ಅರ್ಥವನ್ನು ಹೇಗೆ ಮಾಡಬೇಕು ಎನ್ನುವುದನ್ನು ಈ ಹಿಂದೆ ತಿಳಿಸಲಾಗಿದೆ. ಚಕ್ಷುರ್ಮಯಾದಿ ಶಬ್ದಗಳ ಅರ್ಥವನ್ನು ಆಚಾರ್ಯರು ಐತರೇಯ ಭಾಷ್ಯದಲ್ಲಿ ಹೇಳಿದ್ದಾರೆ - ಸ್ವತಂತ್ರವಾದ ಹಾಗೂ ಪೂರ್ಣವಾದ ದರ್ಶನ ಶಕ್ತಿಯು ಪರಮಾತ್ಮನಿಗೆ ಇದೆಯಾದ ಕಾರಣ ಅವನು ಚಕ್ಷುರ್ಮಯ. ಅದ್ಭುತ ಪ್ರವಚನ ಶಕ್ತಿಯು ಭಗವಂತನಿಗೆ ಇರುವುದರಿಂದ ಅವನು ವಾಙ್ಮಯ. ಹೀಗೆ ಉಳಿದ ಶಬ್ದಗಳಿಗೂ ಅರ್ಥ.

ಅಥವಾ ಈ ಉಪನಿಷತ್ತಿನ ಭಾಷ್ಯದಲ್ಲೇ ಇವುಗಳ ಅರ್ಥವನ್ನು ಆಚಾರ್ಯರು ಹೇಳಿದ್ದಾರೆ —

ಚಕ್ಷುಃ ಸ ಚಷ್ಟೇ ಯದ್ವಿಷ್ಣುಃ ಶ್ರೋತ್ರಂ ಶ್ರೋತೃತ್ವತೋ ವಿಭುಃ ।
ವಾಕ್ಚ ವಕ್ತೃತ್ವತೋ ನಿತ್ಯಂ ಮನೋ ಮಂತೃತ್ವತಸ್ತಥಾ ॥
ತಪೋ ಜ್ಞಾನಸ್ವರೂಪತ್ವಾತ್ ವಿಜ್ಞಾನಂ ತು ವಿವೇಚನಾತ್ ।

ವಿಷ್ಣುವಿಗೆ ನೋಡುವ ಶಕ್ತಿ ಇರುವ ಕಾರಣ ಚಕ್ಷುಃ ಎಂದು ಹೆಸರು. ಕೇಳುವ ಶಕ್ತಿ ಇರುವುದರಿಂದಾಗಿ ಅವನು ಶ್ರೋತ್ರ. ವಕ್ತೃತ್ವ ಶಕ್ತಿಯಿಂದಾಗಿ ಅವನು ವಾಕ್. ಮನನ ಶಕ್ತಿ ಇರುವುದರಿಂದ ಮನಃ. ಜ್ಞಾನರೂಪನಾದುದರಿಂದ ತಪಃ. ತ್ರಿವಿಧ ಜೀವರ ಸ್ವರೂಪವನ್ನು ವಿವೇಚಿಸಿ ಅವರವರಿಗೆ ಯೋಗ್ಯವಾದ ಫಲವನ್ನು ಕೊಡುವ ಕಾರಣ ಅವನು ವಿಜ್ಞಾನ, ಹೀಗೆ ಇಲ್ಲಿ ಭಾಷ್ಯದಲ್ಲಿ ಹೇಳಿರುವ ಅರ್ಥ.

**ಕುತಃ ಏತದ್ರೂಪಾಷ್ಟಕಸ್ಯ ಬ್ರಹ್ಮತ್ವಂ ಇತ್ಯತಃ ಬ್ರಹ್ಮಪ್ರಶ್ನೋತ್ತರತ್ವೇನೈವ ಸಿದ್ಧೇಽಪಿ ಬ್ರಹ್ಮತ್ವೇ ಬ್ರಹ್ಮಲಕ್ಷಣಮಪಿ ಏಷು ಅಸ್ತೀತ್ಯಾಹ-ತಂ ಹೋ ವಾ ಚ । ಯತೋ ವಾ ಇತಿ ॥**

**ಯತ್ ಪ್ರಯಂತಿ ಪ್ರಲಯೇ, ಯದಭಿ ಸ್ವೇಚ್ಛಯಾ ಸಂವಿಶಂತಿ ಮುಕ್ತೌ ತದ್ವಿಜಿಜ್ಞಾಸಸ್ವ = ತದ್ವಿಷಯಕ ಶ್ರವಣ ಮನನ ನಿದಿಧ್ಯಾಸನರೂಪ ಜಿಜ್ಞಾಸಾಂ ಕುರು । ಕುತಃ ? ತದ್ ಬ್ರಹ್ಮ ಅತಃ । ಇತ್ಯುವಾಚೇತಿ ಪೂರ್ವೇಣ ಅನ್ವಯಃ ॥ ೧ ॥**

ಈ ಎಂಟು ರೂಪಗಳು ಬ್ರಹ್ಮ ಏಕೆ ? ಅದಕ್ಕೆ ಉತ್ತರ ಸ್ಪಷ್ಟ - ಭೃಗು ಬ್ರಹ್ಮನನ್ನು ಉಪದೇಶ ನೀಡು, ಎಂದು ಪ್ರಾರ್ಥಿಸಿದಾಗ ವರುಣ ಈ ರೂಪಗಳನ್ನು ಉಪದೇಶಿಸಿದ್ದಾನೆ. ಅದರಿಂದಲೇ ಇವುಗಳು ಬ್ರಹ್ಮನ ರೂಪಗಳು ಎನ್ನುವುದು ಸ್ಪಷ್ಟ. ಅದೂ ಅಲ್ಲದೆ, ಬ್ರಹ್ಮನ ಲಕ್ಷಣವಾದ ಜಗಜ್ಜನ್ಮಾದಿಕಾರಣತ್ವವು ಈ ರೂಪಗಳಲ್ಲಿ ಇದೆ. ಆ ಕಾರಣದಿಂದಾಗಿಯೂ ಈ ಎಂಟು ಬ್ರಹ್ಮನ ರೂಪಗಳು ಎನ್ನುವುದನ್ನು ಮುಂದಿನ ''ಯತೋ ವಾ'' ಇತ್ಯಾದಿ ಉಪನಿಷತ್ತಿನಲ್ಲಿ ಹೇಳಲಾಗಿದೆ.

'ಯತ್ಪ್ರಯಂತಿ' ಇದರ ಜೊತೆಯಲ್ಲಿ 'ಪ್ರಲಯೇ' ಎಂಬ ಶಬ್ದವನ್ನು ಸೇರಿಸಿಕೊಳ್ಳಬೇಕು. ಪ್ರಲಯಕಾಲದಲ್ಲಿ ಬ್ರಹ್ಮನಲ್ಲಿ ಈ ಜಗತ್ತು ಲಯವಾಗುತ್ತದೆ, ಎಂದು ಅರ್ಥ. ಬ್ರಹ್ಮನೊಳಗೆ ಸ್ವೇಚ್ಛೆಯಿಂದ ಮುಕ್ತಿಯಲ್ಲಿ ಜೀವರು ಪ್ರವೇಶಿಸುತ್ತಾರೆ.

ಅಂತಹ ಚಕ್ಷುರ್ಮಯಾದಿರೂಪಗಳ ಜಿಜ್ಞಾಸೆಯನ್ನು ಮಾಡು. ಜಿಜ್ಞಾಸೆ ಎಂದರೆ ಶ್ರವಣ-ಮತ್ತೊಬ್ಬರಿಂದ ಕೇಳಿ ತಿಳಿದುಕೊಳ್ಳುವುದು, ಮನನ-ಕೇಳಿದ್ದನ್ನು ಯುಕ್ತಿಗಳಿಂದ ದೃಢಪಡಿಸಿಕೊಳ್ಳುವುದು, ನಿದಿಧ್ಯಾಸನ - ಧ್ಯಾನ ಮಾಡುವುದು. ಇವುಗಳನ್ನೇಕೆ ಜಿಜ್ಞಾಸೆ ಮಾಡಬೇಕು? ಇವೆಲ್ಲವು ಬ್ರಹ್ಮನ ರೂಪಗಳಾಗಿವೆ (ತದ್ ಬ್ರಹ್ಮ). ಆದ್ದರಿಂದ ಅವುಗಳ ಜಿಜ್ಞಾಸೆ ಮಾಡಬೇಕು. ಕೊನೆಯಲ್ಲಿರುವ 'ಇತಿ' ಶಬ್ದವನ್ನು ಆರಂಭದಲ್ಲಿರುವ 'ಉವಾಚ' ಎಂಬ ಕ್ರಿಯಾಪದದೊಂದಿಗೆ ಅನ್ವಯಿಸಬೇಕು. 'ಇತಿ ಉವಾಚ' ಹೀಗೆ ವರುಣ ಹೇಳಿದನು, ಎಂದು ಅರ್ಥ. ॥ ೧ ॥

**ತತಃ ಕಿಂ ಜಾತಂ ಇತ್ಯತ ಆಹ – ಸ ತಪ ಇತಿ ॥**

ವರುಣನು ಭೃಗುವಿಗೆ ಉಪದೇಶ ಮಾಡಿದ ಮೇಲೆ ಏನಾಯಿತು? ಅದನ್ನು 'ಸ ತಪೋಽತಪ್ಯತ' ಎಂದು ಮುಂದೆ ಹೇಳಲಾಗಿದೆ.

ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಅನ್ನೇನ ಜಾತಾನಿ ಜೀವಂತಿ । ಅನ್ನಂ ಪ್ರಯಂತ್ಯಭಿ ಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ ॥ ೨ ॥

ತಂದೆಯಿಂದ ಉಪದೇಶ ಪಡೆದ ಭೃಗು ವಿಚಾರ ಮಾಡಿದನು. ವಿಚಾರ ಮಾಡಿ ಅನ್ನಮಯ ಅನಿರುದ್ಧನನ್ನು ಧ್ಯಾನದಿಂದ ಸಾಕ್ಷಾತ್ಕರಿಸಿಕೊಂಡನು. ಅನ್ನಮಯನಿಂದಲೇ ಈ ಪ್ರಾಣಿಜಾತಗಳೆಲ್ಲವೂ ಹುಟ್ಟುತ್ತವೆ, ಅವನಿಂದ ಹುಟ್ಟಿ ಅವನಿಂದಾಗಿಯೇ ಜೀವಿಸುತ್ತವೆ. ಪ್ರಲಯಕಾಲದಲ್ಲಿ ಅವನೆಡೆಗೆ ಸಾಗುತ್ತವೆ. ಮುಕ್ತರು ಸ್ವೇಚ್ಛೆಯಿಂದ ಅವನೊಳಗೆ ಪ್ರವೇಶಿಸುತ್ತಾರೆ, ಎಂದು ತಂದೆ ಹೇಳಿದ ಗುಣಗಳನ್ನೆಲ್ಲ ಅನ್ನಮಯನಲ್ಲಿ ಕಂಡನು.

ಹೀಗೆ ಒಂದು ರೂಪವನ್ನು ಸಾಕ್ಷಾತ್ಕರಿಸಿಕೊಂಡು ಮತ್ತೆ ತಂದೆಯಾದ ವರುಣನ ಬಳಿಗೆ ಬಂದನು. ''ಪೂಜ್ಯರೆ, ನನಗೆ ಬ್ರಹ್ಮೋಪದೇಶ ನೀಡಿ'' ಎಂದು ಬೇಡಿಕೊಂಡನು. ತಂದೆ ಅವನಿಗೆ ಹೇಳಿದನು- ''ವಿಚಾರ ಮಾಡಿ ಬ್ರಹ್ಮನನ್ನು ಜಿಜ್ಞಾಸೆ ಮಾಡು'' ಎಂದು.

ಏವಂ ಉಪದಿಷ್ಟಃ ಭೃಗುಃ, ತಪಃ = ಆಲೋಚನಂ, ಅತಪ್ಯತ = ಅಕರೋತ್ । ಸಃ ತಪಃ ತಪ್ತ್ವಾ = ಆಲೋಚನಂ ಕೃತ್ವಾ, ಅನ್ನಂ = ಅನ್ನಮಯಂ ಅನಿರುದ್ಧಂ ಬ್ರಹ್ಮೇತಿ, ವ್ಯಜಾನಾತ್ = ಸಾಕ್ಷಾತ್ ಕೃತವಾನ್ । ಕಥಂ ಇತ್ಯತಃ, ಜಗಜ್ಜನ್ಮಾದಿ ಕರ್ತೃತ್ವರೂಪ ಗುರೂಪದಿಷ್ಟ ಲಕ್ಷಣವತ್ವೇನ ಇತ್ಯಾಹ - ಅನ್ನಾದ್ಧ್ಯೇವೇತಿ ॥ ಅನ್ನಮಯಾದೇವ ಹೀತಿ ।

ಹೀಗೆ ತಂದೆಯಿಂದ ಉಪದೇಶ ಪಡೆದ ಭೃಗುವು ತಪಃ = ಆಲೋಚನೆ-ಯನ್ನು, ಅತಪ್ಯತ = ಮಾಡಿದನು. ಅವನು, ತಪಃ ತಪ್ತ್ವಾ = ಆಲೋಚನೆ ಮಾಡಿ, ಅನ್ನಂ = ಅನ್ನಮಯನಾದ ಅನಿರುದ್ಧನನ್ನು, ಗುಣಪೂರ್ಣನನ್ನಾಗಿ, ವ್ಯಜಾನಾತ್ = ಸಾಕ್ಷಾತ್ಕರಿಸಿಕೊಂಡನು.

ಭೃಗುವು ಯಾವ ರೀತಿ ಅನ್ನಮಯನನ್ನು ಕಂಡನು? ಎಂದರೆ, ವರುಣನು ಹೇಳಿದ ಜಗಜ್ಜನ್ಮಾದಿ ಲಕ್ಷಣಭರಿತನನ್ನಾಗಿ ಕಂಡನು. ಇದನ್ನು 'ಅನ್ನಾದ್ಧ್ಯೇವ' ಎಂಬ ಉಪನಿಷತ್ತು ಹೇಳುತ್ತದೆ. ಅನ್ನಾತ್ ಎಂದರೆ ಅನ್ನಮಯನಿಂದ ಎಂದು ಅರ್ಥ.

**ಪುನಃ ಕಿಮಕರೋತ್? ಇತ್ಯತಃ, ದ್ವಿತೀಯರೂಪಮಪಿ ಸಾಕ್ಷಾತ್ ಕರ್ತುಂ ಗುರ್ವನುಜ್ಞಾರ್ಥಂ ಪುನಃ ಗುರುಂ ಉಪಸಾದ್ಯ ಅನುಜ್ಞಾಮಾದಾಯ, ತಪಃ ಶಬ್ದಿತಂ ಆಲೋಚನಂ ಕೃತ್ವಾ, ಪ್ರಾಣಮಯಾಖ್ಯಂ ದ್ವಿತೀಯಂ ಪ್ರದ್ಯುಮ್ನರೂಪಂ ಅಪರೋಕ್ಷೀಕೃತವಾನ್ ಇತ್ಯಾಹ - ತದ್ವಿಜ್ಞಾಯೇತ್ಯಾದಿನಾ ॥**

ಒಂದು ರೂಪವನ್ನು ಸಾಕ್ಷಾತ್ಕರಿಸಿಕೊಂಡ ಭೃಗುವು ಮತ್ತೇನು ಮಾಡಿದ? ಎರಡನೆಯ ರೂಪವನ್ನು ಪ್ರತ್ಯಕ್ಷೀಕರಿಸುವ ಉದ್ದೇಶದಿಂದ ಗುರುಗಳ ಬಳಿ ಹೋಗಿ, ಅವರ ಅನುಜ್ಞೆ ಪಡೆದ. ಅನಂತರ ಆಲೋಚನೆ ಮಾಡಿ ಪ್ರಾಣಮಯ ಎಂಬ ಎರಡನೆಯ ಪ್ರದ್ಯುಮ್ನ ರೂಪವನ್ನೂ ಕಂಡನು. ಇದನ್ನು 'ತದ್ವಿಜ್ಞಾಯ' ಎಂದು ಮುಂತಾದ ಮುಂದಿನ ಭಾಗ ಹೇಳುತ್ತದೆ.

**ಅಧೀಹೀತಿ ॥ ಅನುಜ್ಞಾಂ ದೇಹಿ, ಇತ್ಯರ್ಥಃ । ಅನುಜಾನೀಹಿ ಇತ್ಯೇವ ವಾಚ್ಯೇ ಅಂತರ್ಣೀತಣ್ಯರ್ಥತಯಾ ಅಧೀಹೀತ್ಯುಕ್ತಿಃ ವಿನಯ ಪ್ರದರ್ಶನಾಯ । ಭಗವಃ = ಭಗವನ್, ಬ್ರಹ್ಮ = ಪ್ರಾಣಮಯಾಖ್ಯಂ ರೂಪಂ, ಧ್ಯಾನೇನ ಸಾಕ್ಷಾತ್ಕರ್ತುಂ ಇತಿ ಶೇಷಃ । ತಪಸಾ = ಜ್ಞಾತಾನುಸಂಧಾನರೂಪ ಆಲೋಚನೇನ ॥ ೨ ॥**

ಅಧೀಹಿ ಎಂದರೆ ಅನುಜ್ಞೆಯನ್ನು ಕೊಡು, ಎಂದು ಅರ್ಥ. ಸ್ಪಷ್ಟವಾಗಿ ಅನುಜಾನೀಹಿ ಎಂದೇ ಹೇಳಬಹುದಿತ್ತು. ಆದರೂ, ವಿನಯ ತೋರಿಸುವ ಕಾರಣದಿಂದ ''ಅಧ್ಯಯನ ಮಾಡಿಸು'' ಎಂದು ಭೃಗು ಹೇಳಿದ್ದಾನೆ.

'ಭಗವಃ' ಎಂದರೆ ಭಗವನ್ = ಪೂಜ್ಯರೇ ಎಂದು ಅರ್ಥ. ಬ್ರಹ್ಮ = ಪ್ರಾಣಮಯರೂಪವನ್ನು, ಧ್ಯಾನದಿಂದ ಕಂಡುಕೊಳ್ಳಲು ಎಂಬ ಅಂಶವನ್ನು ಸೇರಿಸಿಕೊಂಡಾಗ 'ಅದಕ್ಕಾಗಿ ಅನುಜ್ಞೆ ಕೊಡು' ಎಂದು ಅರ್ಥವಾಗುತ್ತದೆ.

ತಪಸಾ ಎಂದರೆ 'ತಪಸ್ಸಿನಿಂದ' ಎಂದು ಅರ್ಥವಲ್ಲ. ಕೇಳಿ ತಿಳಿದಿರುವ ವಿಷಯವನ್ನು ಮನವರಿಕೆ ಮಾಡಿಕೊಳ್ಳುವುದು ಎಂದು ಅರ್ಥ. ॥ ೨ ॥

**ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ।**
**ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ**
**ಭೂತಾನಿ ಜಾಯಂತೇ । ಪ್ರಾಣೇನ ಜಾತಾನಿ ಜೀವಂತಿ । ಪ್ರಾಣಂ**
**ಪ್ರಯಂತ್ಯಭಿ ಸಂವಿಶಂತೀತಿ ।**

ಬ್ರಹ್ಮನು ಜ್ಞಾನರೂಪನೆಂದು ತಿಳಿದು ಧ್ಯಾನಾದಿಗಳನ್ನು ಮಾಡು, ಎಂದು ವರುಣನ ಆದೇಶ. ಅದರಂತೆ ಭೃಗುವು ವಿಚಾರ ಮಾಡಿದನು. ವಿಚಾರ ಮಾಡಿ ಪ್ರಾಣಮಯ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡನು. ಈ ಪ್ರಾಣಮಯ ಪ್ರದ್ಯುಮ್ನನಿಂದಲೇ ಈ ಎಲ್ಲ ಪ್ರಾಣಿಗಳೂ ಹುಟ್ಟುತ್ತವೆ, ಅವನಿಂದ ಹುಟ್ಟಿ ಅವನಿಂದಾಗಿಯೇ ಜೀವಿಸುತ್ತಿವೆ. ಕೊನೆಗೆ ಅವನಲ್ಲೇ ಲಯ ಹೊಂದುತ್ತವೆ. ಮುಕ್ತರೂ ಅವನಲ್ಲೇ ಪ್ರವೇಶಿಸುತ್ತಾರೆ, ಹೀಗೆ ಸಾಕ್ಷಾತ್ತಾಗಿ ತಿಳಿದನು.

**ತದ್ ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ ।**
**ಅಧೀಹಿ ಭಗವೋ ಬ್ರಹ್ಮೇತಿ ।**

**ತಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ**
**ಬ್ರಹ್ಮೇತಿ। ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಮನೋ**
**ಬಹ್ಮೇತಿ ವ್ಯಜಾನಾತ್ । ಮನಸೋ ಹ್ಯೇವ ಖಲ್ವಿಮಾನಿ**
**ಭೂತಾನಿ ಜಾಯಂತೇ । ಮನಸಾ ಜಾತಾನಿ ಜೀವಂತಿ । ಮನಃ**
**ಪ್ರಯಂತ್ಯಭಿ ಸಂವಿಶಂತೀತಿ ।**

ಹೀಗೆ ಪ್ರಾಣಮಯನನ್ನು ಕಂಡು ಭೃಗು ಮತ್ತೆ ತಂದೆ ವರುಣನ ಬಳಿಗೆ ಹೋದನು. ಹೋಗಿ, 'ಪೂಜ್ಯರೆ, ನನಗೆ ಬ್ರಹ್ಮೋಪಾಸನೆ ಮಾಡಲು ಅನುಜ್ಞೆ ನೀಡಿ' ಎಂದನು. ಅವನಿಗೆ ವರುಣನು ಹೇಳಿದನು - 'ವಿಚಾರ ಮಾಡಿ ಜ್ಞಾನವೇ ಬ್ರಹ್ಮನೆಂದು ಧ್ಯಾನಿಸು'.

ಭೃಗುವು ವಿಚಾರ ಮಾಡಿದನು. ವಿಚಾರ ಮಾಡಿ ಮನೋಮಯ ಬ್ರಹ್ಮರೂಪವನ್ನು ಕಂಡುಕೊಂಡನು. ಈ ಮನೋಮಯನೇ ಪ್ರಾಣಿಗಳ ಸೃಷ್ಟಿಕರ್ತಾ, ಅವನೇ ಪಾಲಕ, ಅವನಲ್ಲೇ ಎಲ್ಲರೂ ಲಯ ಹೊಂದುತ್ತಾರೆ, ಮುಕ್ತರು ಪ್ರವೇಶಿಸುತ್ತಾರೆ ಎಂದು ಕಂಡುಕೊಂಡನು.

**ವಿವರಣೆ** — ಪ್ರಾರಂಭದಲ್ಲಿ ವರುಣದೇವರು ಅನ್ನಮಯಾದಿ ಎಂಟು ರೂಪಗಳನ್ನು ಉಪದೇಶಿಸಿದ್ದರೂ ಮತ್ತೆ ಒಂದೊಂದೇ ರೂಪದ ಉಪದೇಶಕ್ಕಾಗಿ ಭೃಗು ಬರುವುದರಿಂದ ಪರಮಾತ್ಮನ ಶ್ರವಣಾದಿಗಳನ್ನು ಮತ್ತೆ ಮತ್ತೆ ಮಾಡಬೇಕೆಂದು ತಿಳಿಯುತ್ತದೆ. ತಂದೆಯಿಂದ ಆಜ್ಞೆಯನ್ನು ಪಡೆದು ಮುಂದು ಮುಂದಿನ ರೂಪಗಳನ್ನು ಭೃಗು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಇದನ್ನು ಅನು-ವ್ಯಾಖ್ಯಾನದಲ್ಲಿ ಆಚಾರ್ಯರು ತಿಳಿಸಿದ್ದಾರೆ.

ದೃಷ್ಟ್ವೈಕೈಕಂ ಸ್ವರೂಪಂ ತು ಸಮಸ್ತೋಕ್ತಾನುದರ್ಶನಮ್ ।
ಇಚ್ಛತಾಜ್ಞಾಂ ಗುರೋಃ ಪ್ರಾಪ್ಯ ತಪಸ್ಯೈವಾಪರೋಕ್ಷಿತಮ್ ॥

**ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪ ಸಸಾರ । ಅಧೀಹಿ ಭಗವೋ ಬ್ರಹ್ಮೇತಿ ।**

**ತꣳ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ವಿಜ್ಞಾನೇನ ಜಾತಾನಿ ಜೀವಂತಿ । ವಿಜ್ಞಾನಂ ಪ್ರಯಂತ್ಯಭಿ ಸಂವಿಶಂತೀತಿ ।**

ಮನೋಮಯ ರೂಪವನ್ನು ಕಂಡು ಭೃಗುವು ಪುನಃ ತಂದೆಯಾದ ವರುಣನ ಬಳಿಗೆ ಬಂದನು. ಮುಂದಿನ ರೂಪವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಅನುಜ್ಞೆ ಬೇಡಿದನು.

ಮಗನಿಗೆ ವರುಣನು ವಿಚಾರ ಮಾಡಿ ಬ್ರಹ್ಮನನ್ನು ಧ್ಯಾನ ಮಾಡುವಂತೆಯೂ ಜ್ಞಾನಸ್ವರೂಪನಾದವನು ಬ್ರಹ್ಮನೆಂದೂ ಉಪದೇಶಿಸಿದನು. ಅದರಂತೆ ಭೃಗುವು ವಿಚಾರ ಮಾಡಿದನು. ವಿಚಾರ ಮಾಡಿ ವಿಜ್ಞಾನಮಯ ಬ್ರಹ್ಮನನ್ನು ಕಂಡುಕೊಂಡನು. ಆ ಬ್ರಹ್ಮನಿಂದಲೇ ಪ್ರಾಣಿಗಳ ಸೃಷ್ಟಿಯನ್ನು ಸ್ಥಿತಿಯನ್ನೂ ಲಯವನ್ನೂ ಅವನಲ್ಲೇ ದೇವತೆಗಳ ಪ್ರವೇಶವನ್ನೂ ತಿಳಿದನು.

**ತದ್ ವಿಜ್ಞಾಯ । ಪುನರೇವ ವರುಣಂ ಪಿತರಮುಪ ಸಸಾರ । ಅಧೀಹಿ ಭಗವೋ ಬ್ರಹ್ಮೇತಿ ।**

**ತꣳಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಆನಂದೋ ಬ್ರಹ್ಮೇತಿ ವ್ಯಜಾನಾತ್ । ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಆನಂದೇನ ಜಾತಾನಿ ಜೀವಂತಿ । ಆನಂದಂ ಪ್ರಯಂತ್ಯಭಿ ಸಂವಿಶಂತೀತಿ ॥ ೩ ॥**

ವಿಜ್ಞಾನಮಯ ಬ್ರಹ್ಮನನ್ನು ಕಂಡ ಭೃಗು ಮತ್ತೆ ತಂದೆಯಾದ ವರುಣನ ಬಳಿಗೆ ಬಂದನು. ಮುಂದಿನ ರೂಪವನ್ನು ಕಂಡುಕೊಳ್ಳಲು ಅನುಜ್ಞೆಯನ್ನು ಬೇಡಿದನು.

ವರುಣನು, ಜ್ಞಾನರೂಪನಾದ ಬ್ರಹ್ಮನನ್ನು ಆಲೋಚಿಸಿ ಧ್ಯಾನಿಸುವಂತೆ ಆದೇಶಿಸಿದನು. ಹಾಗೆಯೇ ಭೃಗು ಆಲೋಚಿಸಿ ಆನಂದಮಯ ಬ್ರಹ್ಮರೂಪವನ್ನು ಕಂಡು ಕೊಂಡನು. ಅವನಿಂದಲೇ ಸೃಷ್ಟಿ ಸ್ಥಿತಿ ಲಯಗಳನ್ನೂ ದೇವತೆಗಳ ಪ್ರವೇಶವನ್ನೂ ತಿಳಿದನು.

**ತಪೋ ಬ್ರಹ್ಮೇತಿ = ಜ್ಞಾನಸ್ವರೂಪಂ ಬ್ರಹ್ಮ, ಇತ್ಯರ್ಥಃ । "ತಪಸಃ ಬ್ರಹ್ಮಜ್ಞಾನ ಹೇತುತ್ವಾತ್ ತಪೋ ಬ್ರಹ್ಮ" ಇತಿ ಗ್ರಂಥಾಂತರೇ । ಅತ್ರ ಪ್ರಾಣಂ, ಪ್ರಯಂತಿ, ಅಭಿಸಂವಿಶಂತೀತ್ಯರ್ಥಃ ।**

ತಪೋ ಬ್ರಹ್ಮ ಎಂದರೆ ಬ್ರಹ್ಮನು ಜ್ಞಾನರೂಪನು ಎಂದರ್ಥ. ಕೆಲವೆಡೆ, ತಪಸ್ಸು ಬ್ರಹ್ಮಪ್ರಾಪ್ತಿಗೆ ಸಾಧನವಾದುದರಿಂದ ತಪಸ್ಸೇ ಬ್ರಹ್ಮ ಎನ್ನಲಾಗಿದೆ, ಎಂಬ ವಿವರಣೆ ಇದೆ.

ಪ್ರಾಣಂ ಪ್ರಯಂತಿ, ಪ್ರಾಣಂ ಅಭಿಸಂವಿಶಂತಿ, ಪ್ರಾಣಮಯನಲ್ಲಿ ಲಯ ಹೊಂದುತ್ತಾರೆ, ದೇವತೆಗಳು ಮೋಕ್ಷದಲ್ಲಿ ಅವನನ್ನೇ ಪ್ರವೇಶಿಸುತ್ತಾರೆ, ಎಂದು ಅರ್ಥ.

**ಏವಂ ಅನ್ನಪ್ರಾಣ ಪ್ರಕರಣದ್ವಯಾನಂತರಂ "ತದ್ವಿಜ್ಞಾಯ ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಂ ಹೋವಾಚ ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ । ಚಕ್ಷುರ್ಬ್ರಹ್ಮೇತಿ ವ್ಯಜಾನಾತ್ । ಚಕ್ಷುಷೋ ಹ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ॥" ಇತ್ಯಾದಿ ರೂಪೇಣ ಚಕ್ಷುರ್ಮಯ ಶ್ರೋತ್ರಮಯ ವಾಙ್ಮಯ ಪ್ರಕರಣಾನಿ ಯಥೋದ್ದೇಶಂ ಧ್ಯೇಯಾನಿ ।**

**ತ್ರೀಣಿ ರೂಪಾಣಿ ಕಾನಿ, ಇತ್ಯಾಕಾಂಕ್ಷಾಯಾಂ ಪ್ರಾಜ್ಞೈರುಪದೇಷ್ಟವ್ಯಾನಿ । ಮನಃ ಪ್ರಭೃತಿಶಬ್ದಿತ ಸಂಕರ್ಷಣಾದಿ ರೂಪತ್ರಯ ಪರತಯಾ ಪ್ರಕರಣ ತ್ರಯಮಪಿ ವ್ಯಾಖ್ಯೇಯಮ್ ॥ ೩ ॥**

ಅನ್ನಮಯ-ಪ್ರಾಣಮಯ ಈ ಎರಡು ಪ್ರಕರಣಗಳ ಅನಂತರ ಚಕ್ಷುರ್ಮಯ - ಶ್ರೋತ್ರಮಯ - ವಾಙ್ಮಯ ಪ್ರಕರಣಗಳನ್ನೂ ಸೇರಿಸಿ-ಕೊಳ್ಳಬೇಕು "ಭೃಗು ಚಕ್ಷುರ್ಮಯ ರೂಪದ ಸಾಕ್ಷಾತ್ಕಾರಕ್ಕಾಗಿ ತಂದೆಯ ಅನುಜ್ಞೆ ಕೇಳಿದ, ತಂದೆ ಉಪದೇಶ ನೀಡಿದ. ಆ ರೂಪವನ್ನು ಸಾಕ್ಷಾತ್ಕರಿಸಿಕೊಂಡ.

ಇದರಂತೆಯೇ ಶ್ರೋತ್ರಮಯ ರೂಪವನ್ನೂ ಅನಂತರ ವಾಙ್ಮಯ-ರೂಪವನ್ನೂ ಸಾಕ್ಷಾತ್ಕರಿಸಿಕೊಂಡ", ಎಂದು.

ಇಲ್ಲಿ ಅನ್ನಮಯಾದಿ ಪಂಚರೂಪಗಳ ಹೆಸರನ್ನು ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣ ಎಂದು ಆಚಾರ್ಯರು ತಿಳಿಸಿರುತ್ತಾರೆ.

ಆದರೆ ಶ್ರೋತ್ರಮಯ, ಚಕ್ಷುರ್ಮಯ, ವಾಙ್ಮಯ ರೂಪಗಳ ಬಗ್ಗೆ ತಿಳಿಸಿಲ್ಲ. ಆ ರೂಪಗಳು ಯಾವುವು? ಎಂಬುದನ್ನು ಜ್ಞಾನಿಗಳು ಉಪದೇಶಿಸಬೇಕು. (ತಿಳಿದವರು ಹೇಳಬೇಕು, ಎನ್ನುತ್ತಿದ್ದಾರೆ ರಾಯರು) ॥ ೩ ॥

**ಅತ್ರ ಅನ್ನಾದೌ ಸರ್ವತ್ರ ಅಬ್ರಹ್ಮಣಿ ಬ್ರಹ್ಮತ್ವಂ ಉಪಾಸ್ತ್ಯರ್ಥಂ ಉಕ್ತಂ ಇತಿ ಭ್ರಮನಿರಾಸಾಯ ಆಹ - ಸೈಷೇತಿ ॥**

''ಈ ಹಿಂದಿನ ಪ್ರಕರಣಗಳಲ್ಲಿ ಹೇಳಿರುವ ಅನ್ನಮಯ - ಪ್ರಾಣಮಯಾದಿಗಳು ಒಂದೂ ಬ್ರಹ್ಮನ ರೂಪಗಳಲ್ಲ, ಜಡವಾದ ಕೋಶಗಳು. ಅವುಗಳನ್ನು ವರುಣನು ಬ್ರಹ್ಮನೆಂದು ಹೇಳಿದ್ದರೂ ಅದು ಕೇವಲ ಉಪಾಸನೆಗಾಗಿ. ಉಪಾಸನೆ ಮಾಡಬೇಕಾದರೆ ವಸ್ತುಸ್ಥಿತಿಯ ಅಗತ್ಯವಿಲ್ಲ. ಕಲ್ಲನ್ನು ದೇವರು ಎಂದು ಆರಾಧಿಸಿದಂತೆ ಜಡವಾದ ಕೋಶಗಳನ್ನೇ ಬ್ರಹ್ಮನೆಂದು ಉಪಾಸನೆ ಮಾಡಬಹುದು.'' ಹೀಗೆ ಭ್ರಾಂತಿ ಬರುವ ಸಾಧ್ಯತೆ ಇದೆ. ಇದು ಸರಿಯಲ್ಲ. ಅವೆಲ್ಲವೂ ಬ್ರಹ್ಮನ ರೂಪಗಳೇ ಆಗಿವೆ, ಎನ್ನುವುದನ್ನು ಮುಂದಿನ ಭಾಗದಲ್ಲಿ ಹೇಳಲಾಗಿದೆ.

**ಸೈಷಾ ಭಾರ್ಗವೀ ವಾರುಣೀ ವಿದ್ಯಾ । ಪರಮೇ ವ್ಯೋಮನ್**

**ಪ್ರತಿಷ್ಠಿತಾ । ಯ ಏವಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ**

**ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ ।**

**ಮಹಾನ್ ಕೀರ್ತ್ಯಾ ॥ ೪ ॥**

ಇದುವರೆಗೆ ಹೇಳಿರುವ ತತ್ವವು ಭೃಗುವಿನಿಂದ ಕಂಡಿರುವ ಕಾರಣ 'ಭಾರ್ಗವೀ ವಿದ್ಯಾ' ಎಂದೂ ವರುಣನಿಂದ ಉಪದಿಷ್ಟವಾದ ಕಾರಣ 'ವಾರುಣೀ ವಿದ್ಯಾ' ಎಂದೂ ಹೆಸರು ಪಡೆದಿದೆ. ಈ ವಿದ್ಯೆಯು ಆಕಾಶದಂತೆ ಯಾವ ವಿಕಾರವೂ ಇಲ್ಲದ ಪರಮಾತ್ಮನ ವಿದ್ಯೆಯಾಗಿದೆ.

ಯಾರು ಅನ್ನಮಯಾದಿ ಎಂಟು ರೂಪಗಳು ಜಗಜನ್ಮಾದಿ ಕಾರಣಗಳಾದ. ಬ್ರಹ್ಮನ ರೂಪಗಳು ಎಂದು ತಿಳಿಯುವನೋ ಅವನು ಮುಕ್ತನಾಗಿ ಪರಮಾತ್ಮನ ಸಮೀಪದಲ್ಲೇ ಉಳಿಯುತ್ತಾನೆ. ಅನ್ನಮಯ ಪರಮಾತ್ಮನು ಅಂತಹವನಿಗೆ

ರಕ್ಷನಾಗುತ್ತಾನೆ. ಮೋಕ್ಷದಲ್ಲಿ ಅನ್ನಮಯನನ್ನು ಅವಲಂಬಿಸಿರುತ್ತಾನೆ. ಇಹದಲ್ಲಿ ಶಿಷ್ಯಸಂಪತ್ತು - ದ್ರವ್ಯಸಂಪತ್ತಿನಿಂದ ಸಮೃದ್ಧನಾಗುತ್ತಾನೆ. ಅವನ ಕೀರ್ತಿಯು ಎಲ್ಲೆಡೆ ಹಬ್ಬುತ್ತದೆ.

**ಭಾರ್ಗವೀ = ಭೃಗುಣಾ ಅನುಶಿಷ್ಟಾ। ವಾರುಣೀ = ವರುಣೇನ ಉಪದಿಷ್ಟಾ। ಸೈಷಾ = 'ಅನ್ನಂ ಪ್ರಾಣಂ' ಇತ್ಯಾದಿನಾ ಉಕ್ತಾ ವಿದ್ಯಾ, ಪರಮೇ ವ್ಯೋಮನ್= ಅಚ್ಛಿದ್ಯತ್ವಾದಿನಾ ವ್ಯೋಮನಿಭೇ ಹರೌ. ಪ್ರತಿಷ್ಠಿತಾ, ತತ್ಪರೇತಿ ಯಾವತ್ । ಬ್ರಹ್ಮ ಪ್ರಶ್ನೋತ್ತರತ್ವಾತ್, ಬ್ರಹ್ಮಲಕ್ಷಣಾತ್, ಬ್ರಹ್ಮಶಬ್ದಾಭ್ಯಾಸಾತ್, ತಪಸಾ ಅಪರೋಕ್ಷೀಕೃತತ್ವ ಲಿಂಗಾಚ್ಚ ಇತಿ ಭಾವಃ ।**

**'ಸುಪಾಂ ಸು ಲುಕ್' ಇತ್ಯಾದಿನಾ ಸಪ್ತಮ್ಯಾಃ ಲುಕಿ ''ನ ಙ ಸಂಬುದ್ಧ್ಯೋಃ'' ಇತಿ ಲೋಪಾಭಾವೇ ವ್ಯೋಮನ್ ಇತಿ ಸಾಧು ।**

ಉಪನಿಷತ್ತಿನಲ್ಲಿ ಅನ್ನಮಯಾದಿ ವಿದ್ಯೆಯನ್ನು ಭಾರ್ಗವೀ ವಾರುಣೀ ಎಂದು ಕರೆಯಲಾಗಿದೆ. ಭೃಗು ಈ ವಿದ್ಯೆಯನ್ನು ಕರಗತ ಮಾಡಿಕೊಂಡಿರುವ ಕಾರಣದಿಂದಾಗಿ ಇದು ಭಾರ್ಗವೀ ಎಂದೂ ವರುಣನು ಉಪದೇಶ ಮಾಡಿರುವ ಕಾರಣದಿಂದ ವಾರುಣೀ ಎಂದೂ ಇದಕ್ಕೆ ಹೆಸರು ಬಂದಿದೆ.

ಸೈಷಾ (ಸಾ + ಏಷಾ) = ''ಅನ್ನಂ ಪ್ರಾಣಂ ಚಕ್ಷುಃ'' ಇತ್ಯಾದಿಯಾಗಿ ಆರಂಭದಿಂದ ಇದುವರೆಗೆ ಹೇಳಿರುವ ವಿದ್ಯೆಯು, ಪರಮೇ ವ್ಯೋಮನ್ - ವ್ಯೋಮ್ನಿ = ಆಕಾಶದಂತೆ ವಿಕಾರರಹಿತನಾದ ಶ್ರೀಹರಿಯಲ್ಲಿ, ಪ್ರತಿಷ್ಠಿತಾ = ಅವನ ಕುರಿತದ್ದಾಗಿದೆ. ಈ ವಿದ್ಯೆಯು ಪರಮಾತ್ಮವಿದ್ಯೆ ಎಂದು ತಾತ್ಪರ್ಯ. ಏಕೆಂದರೆ,

೧. ಭೃಗು 'ಬ್ರಹ್ಮನನ್ನು ಉಪದೇಶ ನೀಡಬೇಕು' ಎಂದು ಪ್ರಾರ್ಥಿಸಿದಾಗ ಈ ವಿದ್ಯೆಯನ್ನು ವರುಣನು ಉಪದೇಶಿಸಿದ್ದಾನೆ.

೨. ಜಗತ್ತಿನ ಸೃಷ್ಟ್ಯಾದಿಕರ್ತೃತ್ವವು ಬ್ರಹ್ಮನ ಲಕ್ಷಣ. ಅದೇ-ಲಕ್ಷಣವನ್ನು ಈ ಎಲ್ಲ ರೂಪಗಳಿಗೂ ಹೇಳಲಾಗಿದೆ.

೩. 'ಅನ್ನಂ ಬ್ರಹ್ಮೇತಿ ವ್ಯಜಾನಾತ್' ಎಂದು ಮುಂತಾಗಿ ಬ್ರಹ್ಮ ಶಬ್ದವನ್ನು ಹೇಳಲಾಗಿದೆ.

೪. ಭೃಗು ತಂದೆ ಹೇಳಿದಂತೆ ಧ್ಯಾನಾದಿಗಳನ್ನು ಮಾಡಿ ಅನ್ನಮಯಾದಿಗಳನ್ನು ಬ್ರಹ್ಮನೆಂದು ಅಪರೋಕ್ಷೀಕರಿಸಿಕೊಂಡಿದ್ದಾನೆ. ಈ ಕಾರಣಗಳಿಂದಾಗಿ ಅನ್ನಮಯಾದಿ ಎಂಟೂ ಬ್ರಹ್ಮನ ರೂಪಗಳೇ ಆಗಿವೆ.

ಉಪನಿಷತ್ತಿನಲ್ಲಿ 'ವ್ಯೋಮನ್' ಎಂಬ ಪದವಿದೆ. ಅದು 'ವ್ಯೋಮ್ನಿ' ಎಂದಾಗಬೇಕು. ಆದರೆ ವೇದದಲ್ಲಿ ಪದದ ಮುಂದೆ ಬರುವ ವಿಭಕ್ತಿಗಳು ಲೋಪವಾಗುತ್ತವೆ. ವ್ಯೋಮನ್ ಶಬ್ದಕ್ಕೆ ಸಪ್ತಮೀ ವಿಭಕ್ತಿ ಬಂದು ಲೋಪವಾಗಿದೆ. ಕೊನೆಯಿಲ್ಲಿರುವ ನಕಾರಕ್ಕೆ 'ನಙ ಸಂಬುದ್ಧ್ಯೋಃ' ಎಂಬ ಸೂತ್ರದ ನಿಷೇಧವಿರುವ ಕಾರಣ ''ನ ಲೋಪಃ ಪ್ರಾತಿಪದಿಕಾಂತಸ್ಯ' ಎಂಬ ಸೂತ್ರದಿಂದ ಲೋಪವಾಗುವುದಿಲ್ಲ. ಹೀಗಾಗಿ 'ವ್ಯೋಮ್ನಿ' ಎನ್ನುವ ಬದಲು 'ವ್ಯೋಮನ್'' ಎಂದಿರುವುದು ಸರಿಯಾಗಿದೆ.

**ಅನ್ನಾದಿರೂಪಾಷ್ಟಕಸ್ಯ ಬ್ರಹ್ಮತ್ವಜ್ಞಾನಿನಃ ಫಲಮಾಹ - 'ಯ ಏವಂ ವೇದ' ಇತ್ಯಾದಿನಾ ॥ ಯಃ ಅಧಿಕಾರೀ, ಏವಂ = ಉಕ್ತರೂಪಾಷ್ಟಕಂ ಬ್ರಹ್ಮತ್ವೇನ ವೇದ, ಸಃ ಇತಿ ಶೇಷಃ । ಪ್ರತಿತಿಷ್ಠತಿ = ಮುಕ್ತಃ ಸನ್ ಹರೌ ಪ್ರತಿಷ್ಠಿತಃ ಭವತಿ । ಅನ್ನವಾನ್ = ರಕ್ಷಕತ್ವೇನ ಅನ್ನನಾಮಕ ವಿಷ್ಣುಮಾನ್, ತದ್ರಕ್ಷ್ಯಃ ಇತಿ ಯಾವತ್ । ಅನ್ನಾದಃ = ಅನ್ನ ನಾಮಕಂ ಹರಿಂ ಅತ್ತಿ, ಉಪಜೀವತಿ ಇತಿ ಅನ್ನಾದಃ । ಪ್ರಜಯಾ = ಶಿಷ್ಯಪ್ರಜಯಾ, ಪಶುಭಿಃ ಬ್ರಹ್ಮವರ್ಚಸೇನ ಚ ಮಹಾನ್ ಭವತಿ । ಕೀರ್ತ್ಯಾ ಚ ಮಹಾನ್ ಭವತಿ ಇತ್ಯರ್ಥಃ ॥ ೪ ॥**

ಅನ್ನಮಯಾದಿ ಎಂಟು ರೂಪಗಳು ಗುಣಪೂರ್ಣವಾಗಿರುವುದರಿಂದ ಬ್ರಹ್ಮವೆನಿಸಿವೆ ಎಂದು ತಿಳಿದವನಿಗೆ ದೊರಕುವ ಫಲವನ್ನು ''ಯ ಏವಂ ವೇದ'' ಎನ್ನುವ ಮಂತ್ರದಲ್ಲಿ ಹೇಳಲಾಗಿದೆ.

''ಯಾವ ಯೋಗ್ಯನಾದ ಸಾಧಕನು, ಏವಂ = ಹಿಂದೆ ಹೇಳಿರುವ ಅನ್ನಾದಿ ಎಂಟೂ ರೂಪಗಳು (ಬ್ರಹ್ಮ) ಗುಣಪೂರ್ಣವಾಗಿವೆ ಎಂದು ತಿಳಿಯುವನೋ'' 'ಇದು ಯ ಏವಂ ವೇದ' ಎನ್ನುವ ವಾಕ್ಯದ ಅರ್ಥ. 'ಸಃ' ಎಂಬ ಪದವನ್ನು ಸೇರಿಸಿಕೊಳ್ಳಬೇಕು. ಅಂತಹವನು ಪ್ರತಿತಿಷ್ಠತಿ = ಮುಕ್ತನಾಗಿ ಶ್ರೀಹರಿಯಲ್ಲಿ ಸ್ಥಿರಗೊಳ್ಳುತ್ತಾನೆ. ಅನ್ನವಾನ್ ಭವತಿ = ಅನ್ನವುಳ್ಳವನಾಗುತ್ತಾನೆ = ಅನ್ನನಾಮಕ ಪರಮಾತ್ಮನೇ ಅವನಿಗೆ ರಕ್ಷಕನಾಗಿರುತ್ತಾನೆ. ಅನ್ನಾದಃ = ಅನ್ನನಾಮಕ ಶ್ರೀಹರಿಯನ್ನು ತಿನ್ನುತ್ತಾನೆ, ಅವನನ್ನು ಅವಲಂಬಿಸಿರುತ್ತಾನೆ. ಪ್ರಜಯಾ = ಶಿಷ್ಯಸಮೂಹದಿಂದ, ದ್ರವ್ಯದಿಂದ, ಹಿರಿತನವನ್ನು ಗಳಿಸುತ್ತಾನೆ. ಕೀರ್ತಿಗಳಿಸಿಯೂ ದೊಡ್ಡವನಾಗುತ್ತಾನೆ. ॥ ೪ ॥

'ಅನ್ನವಾನ್ ಅನ್ನಾದಃ' ಇತಿ ಪ್ರಕೃತ - ಅನ್ನಾಖ್ಯಭಗವನ್ನಿಷ್ಠಾಃ ಬಹ್ವೀಃ ವಿದ್ಯಾಃ ವ್ರತಪೂರ್ವಮಾಹ - ಅನ್ನಮಿತ್ಯಾದಿನಾ ॥

ಹಿಂದಿನ ಮಂತ್ರದಲ್ಲಿ ಅನ್ನಮಯ ರೂಪವು ಪ್ರಕೃತವಾಗಿದೆ. ಆ ರೂಪಕ್ಕೆ ಸಂಬಂಧಿಸಿದ ಇನ್ನೂ ಅನೇಕ ರಹಸ್ಯಗಳನ್ನು ಮುಂದಿನ ಮಂತ್ರದಲ್ಲಿ ಹೇಳಲಾಗಿದೆ. ॥ ೪ ॥

ಅನ್ನಂ ನ ನಿಂದ್ಯಾತ್ । ತದ್ ವ್ರತಮ್ । ಪ್ರಾಣೋ ವಾ ಅನ್ನಮ್ । ಶರೀರಮನ್ನಾದಮ್ । ಪ್ರಾಣೇ ಶರೀರಂ ಪ್ರತಿಷ್ಠಿತಮ್ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ ।

ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೫ ॥

ಪರಮಾತ್ಮನನ್ನು ನಿಂದಿಸಕೂಡದು. ಸುಖವನ್ನು ಬಯಸುವವರು ಈ ವ್ರತವನ್ನು ತೊಡಬೇಕು. ದೇಹದಲ್ಲಿರುವ ಪ್ರಾಣಸ್ಥ ಭಗವದ್ರೂಪವೇ ಅನ್ನ. ಜೀವಾತ್ಮನಿಗೆ ಪ್ರೇರಕವಾದ ಭಗವದ್ರೂಪವು ಪ್ರಾಣಸ್ಥ ಅನ್ನರೂಪವನ್ನು ಅನುಭವಿಸುತ್ತದೆ. ಪ್ರಾಣಸ್ಥರೂಪದಲ್ಲಿ ಶರೀರಸ್ಥವಾದ - ಭಗವದ್ರೂಪವು ನೆಲೆಗೊಂಡಿದೆ. ಶರೀರಸ್ಥರೂಪದಲ್ಲಿ ಪ್ರಾಣಸ್ಥ ರೂಪವು ನೆಲೆಸಿದೆ. ಅರ್ಥಾತ್, ಅನ್ನರೂಪವು ಅನ್ನರೂಪದಲ್ಲೇ ನೆಲೆಸಿದೆ.

ಹೀಗೆ ಅನ್ನದಲ್ಲಿ ಅನ್ನವು ನೆಲೆಗೊಂಡಿದೆ ಎಂದು ತಿಳಿದ ಜ್ಞಾನಿಯು ಮೋಕ್ಷದಲ್ಲಿ ಅನ್ನಮಯ ಭಗವಂತನನ್ನೇ ಅನುಭವಿಸುತ್ತಾನೆ. ಶಿಷ್ಯಸಂಪತ್ತಿನಿಂದ, ದ್ರವ್ಯಸಂಪತ್ತಿನಿಂದ, ಬ್ರಹ್ಮತೇಜಸ್ಸಿನಿಂದ ಶ್ರೇಷ್ಠ ವ್ಯಕ್ತಿಯಾಗುವನು, ಕೀರ್ತಿಯಿಂದಲೂ ಹಿರಿಯನಾಗುತ್ತಾನೆ.

**ಅನ್ನಂ = ಭಗವಂತಂ ನ ನಿಂದ್ಯಾತ್ । ತತ್ ವ್ರತಂ – ಜ್ಞಾನಿನಃ ಸುಖೇಪ್ಸೋಃ ವ್ರತಂ ಇತ್ಯರ್ಥಃ । ಪ್ರಾಣಃ = ದೇಹಸ್ಥ ಪ್ರಾಣಗತಃ ಪ್ರಾಣನಾಮಾ ಹರಿಃ, ಅನ್ನಂ ವೈ = ಅನ್ನ ನಾಮಕೋ ವೈ । ಶರೀರಂ, ಶರಃ = ಜೀವಃ, ತಂ ಈರಯತಿ = ಪ್ರೇರಯತಿ ಇತಿ ಶರೀರಂ – ಜೀವ ಪ್ರೇರಕಂ ಜೀವಸ್ಥಂ ರೂಪಂ, ಅನ್ನಾದಂ = ಅನ್ನಾಖ್ಯರೂಪಾನುಭವಿತೃ । ಶರೀರಂ ಅನ್ನಂ ಪ್ರಾಣಃ ಅನ್ನಾದಃ ಇತ್ಯಪಿ ಯೋಜ್ಯಮ್ ॥**

'ಅನ್ನ' ಎಂದರೆ ಪರಮಾತ್ಮ. ಅವನನ್ನು ತೆಗಳಕೂಡದು. 'ತತ್ ವ್ರತಂ' ಎಂದರೆ ಸುಖವನ್ನು ಬಯಸುವ ಜ್ಞಾನಿಯ ಕರ್ತವ್ಯ ಇದು. ಪ್ರಾಣಃ ಎಂದರೆ ದೇಹದಲ್ಲಿರುವ ಪ್ರಾಣಸ್ಥ ಭಗವದ್ರೂಪ. ಅದಕ್ಕೆ ಪ್ರಾಣ ಎಂದೇ ಹೆಸರು. ಅವನು ಅನ್ನಂ ವೈ = ಅನ್ನ ಎಂದೆನಿಸುತ್ತಾನೆ. ಶರ್ + ಈರ = ಶರೀರ. ಶರ ಎಂದರೆ ಜೀವಾತ್ಮ. ಅವನಿಗೆ ಪ್ರೇರಕನಾದ ಭಗವಂತ ಶರೀರ. ಒಟ್ಟಿನಲ್ಲಿ ಜೀವ ಪ್ರೇರಕನಾಗಿ ಜೀವನಲ್ಲಿರುವ ಭಗವದ್ರೂಪ ಶರೀರ. ಆ ರೂಪವು ಅನ್ನಾದ-ಅನ್ನರೂಪವನ್ನು ಅನುಭವಿಸುವವನು. ಇದರ ಜೊತೆಯಲ್ಲಿ, ಶರೀರವು ಅನ್ನ, ಪ್ರಾಣ ಅನ್ನಾದ ಎಂದೂ ಸೇರಿಸಿಕೊಳ್ಳಬೇಕು. ಹೀಗೆ 'ಪ್ರಾಣ' ಅನ್ನವಾದಾಗ 'ಶರೀರ' ಅನ್ನಾದ. ಶರೀರವು ಅನ್ನವಾದಾಗ 'ಪ್ರಾಣ' ಅನ್ನಾದ. ಪರಮಾತ್ಮ ದೇಹದಲ್ಲಿದ್ದು ತನ್ನ ರೂಪಗಳನ್ನು ತಾನೇ ಅನುಭವಿಸುತ್ತಾನೆ ಎಂದು ಭಾವ.

**ದ್ವಯೋರಪಿ ಅನ್ನತ್ವಂ ಅನ್ನಾದತ್ವಂ ಚ ವ್ಯನಕ್ತಿ – ಪ್ರಾಣೇ ಇತಿ ॥ ಪ್ರಾಣೇ = ಪ್ರಾಣಸ್ಥೇ ಪ್ರಾಣಾಖ್ಯರೂಪೇ, ಶರೀರಂ = ಶರೀರಾಖ್ಯಂ ಜೀವನಿಯಂತೃ ರೂಪಂ, ಪ್ರತಿಷ್ಠಿತಮ್ । ಶರೀರೇ = ಶರೀರಾಖ್ಯೇ ರೂಪೇ, ಪ್ರಾಣಃ = ಪ್ರಾಣಾಖ್ಯೋ ಹರಿಃ ಪ್ರತಿಷ್ಠಿತಃ । ಅನ್ಯೋನ್ಯಾನ್ನತ್ವಂ = ಅನ್ಯೋನ್ಯ ಪ್ರತಿಷ್ಠಿತತ್ವಮ್ ।**

ಪ್ರಾಣ-ಶರೀರ ಈ ಎರಡೂ ರೂಪಗಳು ಪರಸ್ಪರ ಅನ್ನಗಳೂ, ಅನ್ನಾದಗಳೂ ಆಗಿವೆ ಎನ್ನುವುದನ್ನು ಮುಂದಿನ ''ಪ್ರಾಣೇ ಶರೀರಂ'' ಇತ್ಯಾದಿ ವಾಕ್ಯಗಳಿಂದ ಉಪನಿಷತ್ತು ಸ್ಪಷ್ಟಪಡಿಸುತ್ತದೆ. ಅದರ ಅರ್ಥ ಹೀಗೆ - ಪ್ರಾಣೇ = ಪ್ರಾಣದಲ್ಲಿರುವ ಪ್ರಾಣನಾಮಕವಾದ ರೂಪದಲ್ಲಿ, ಶರೀರಂ = ಶರೀರ ಎಂಬ ಹೆಸರಿನ ಪರಮಾತ್ಮನ

ಜೀವ ನಿಯಾಮಕರೂಪವು ನೆಲಸಿದೆ. ಶರೀರೇ = ಶರೀರಾಖ್ಯರೂಪದಲ್ಲಿ ಪ್ರಾಣಃ = ಪ್ರಾಣಾಖ್ಯರೂಪವು ನೆಲೆಗೊಂಡಿದೆ. ಹೀಗಾಗಿ ಶರೀರಕ್ಕೆ ಪ್ರಾಣವು ಅನ್ನ, ಪ್ರಾಣಕ್ಕೆ ಶರೀರವು ಅನ್ನ. ಇಲ್ಲಿ ಅನ್ನ ಎಂದರೆ ಆಶ್ರಯ-ನೆಲೆ ಎಂದರ್ಥ. ಎರಡೂ ರೂಪಗಳೂ ಒಂದನ್ನೊಂದು ಅವಲಂಬಿಸಿರುವುದರಿಂದ ಒಂದಕ್ಕೆ ಮತ್ತೊಂದು ಅನ್ನವೆನಿಸುತ್ತದೆ.

**ಉಕ್ತಂ ಉಪಸಂಹರತಿ - ತದೇತದನ್ನಮನ್ನೇ ಪ್ರತಿಷ್ಠಿತಮಿತಿ ॥ ತದೇತದ್ ರೂಪದ್ವಯಂ ಅನ್ಯೋನ್ಯಂ ಅನ್ನಂ, ಅನ್ನೇ ಪ್ರತಿಷ್ಠಿತಂ ಚೇತಿ । ಅನ್ಯೋನ್ಯಭೋಗ್ಯ ಭೋಕ್ತೃತ್ವಶಬ್ದಿತಂ ಅನ್ಯೋನ್ಯಪ್ರತಿಷ್ಠಿತತ್ವಂ ಲೀಲಯಾ ಹರೇಃ ಯುಕ್ತಂ ಇತಿ ಭಾವಃ ।**

ಈವರೆಗೆ ಹೇಳಿದ್ದನ್ನು 'ತದೇತ್' ಎನ್ನುವ ವಾಕ್ಯದಲ್ಲಿ ಉಪಸಂಹಾರ ಮಾಡಲಾಗಿದೆ. ತದೇತತ್ = ಪ್ರಾಣ-ಶರೀರ ಎಂಬ ಎರಡು ರೂಪಗಳು ಒಂದಕ್ಕೆ ಮತ್ತೊಂದು ಅನ್ನವೆನಿಸಿವೆ. ಒಂದರಲ್ಲಿ ಒಂದು ಆಶ್ರಿತವೂ ಆಗಿವೆ. ಒಂದು ರೂಪವನ್ನು ಇನ್ನೊಂದು ರೂಪವು ಅನುಭವಿಸುವಾಗ ಮೊದಲ ರೂಪವು ಭೋಗ್ಯವಾಗುತ್ತದೆ, ಎರಡನೆಯ ರೂಪವು ಭೋಕ್ತೃವಾಗುತ್ತದೆ. ಭೋಕ್ತೃ-ರೂಪದಲ್ಲಿ ಭೋಗ್ಯರೂಪವು ಆಶ್ರಿತವಾಗಿರುತ್ತದೆ. ಈ ಎರಡೂ ರೂಪಗಳೂ ಒಂದೇ ಆದರೂ ಒಂದನ್ನು ಮತ್ತೊಂದು ಅನುಭವಿಸುವುದು ಶ್ರೀ ಹರಿಯ ಕ್ರೀಡೆ ಎಂದು ತಿಳಿಯಬೇಕು.

**ತಾತ್ಪರ್ಯದ್ಯೋತನಾಯ ತಜ್ಞಾನಿನಃ ಫಲಮಾಹ - ಸ ಯ ಇತಿ ॥ ಸಃ ಇತ್ಯಸ್ಯ ಪ್ರತಿತಿಷ್ಠತಿ ಇತ್ಯಾದೌ ಅನ್ವಯಃ । ವ್ಯಾಖ್ಯಾನಂ ಪ್ರಾಗ್ವತ್ ।**

ಈ ಹಿಂದೆ ಹೇಳಿದ ವಿಷಯ ಪ್ರಶಂಸೆಯಲ್ಲ, ಅದು ತಥ್ಯ, ಅದರಲ್ಲಿ ತಾತ್ಪರ್ಯವಿದೆ ಎಂದು ತಿಳಿಸಲೋಸುಗ ಅದನ್ನು ತಿಳಿದವನಿಗೆ ಸಿಗುವ ಫಲವನ್ನು ಉಪನಿಷತ್ತು 'ಸ ಯ ಏತತ್' ಮುಂತಾದ ಮುಂದಿನ ಭಾಗದಿಂದ ತಿಳಿಸುತ್ತಿದೆ. ಇಲ್ಲಿರುವ ಸಃ ಎಂಬ ಶಬ್ದಕ್ಕೆ ಪ್ರತಿತಿಷ್ಠತಿ, ಭವತಿ ಎಂಬ ಕ್ರಿಯಾಪದಗಳೊಂದಿಗೆ ಅನ್ವಯ. ಅನ್ನವಾನ್, ಅನ್ನಾದಃ ಮುಂತಾದ ಪದಗಳಿಗೆ ಹಿಂದಿನಂತೆಯೇ ವ್ಯಾಖ್ಯಾನ ಮಾಡಬೇಕು. ॥ ೫ ॥

**ಅನ್ನಂ ನ ಪರಿಚಕ್ಷೀತ । ತದ್ ವ್ರತಮ್ । ಆಪೋ ವಾ ಅನ್ನಮ್ । ಜ್ಯೋತಿರನ್ನಾದಮ್ । ಅಪ್ಸು ಜ್ಯೋತಿಃ ಪ್ರತಿಷ್ಠಿತಮ್ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಮ್ ।**

**ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥**

ಅನ್ನ ಎಂಬ ಹೆಸರಿನ ಭಗವಂತನನ್ನು ಎಂದೂ ಬಿಟ್ಟಿರಬಾರದು. ಇದು ಬ್ರಹ್ಮಜ್ಞಾನಿಯ ದೀಕ್ಷೆಯಾಗಿರಬೇಕು. ನೀರಿನಲ್ಲಿರುವ ಪರಮಾತ್ಮನ ರೂಪ 'ಅಪ್' ಎನಿಸಿದೆ. ತೇಜಸ್ಸಿನಲ್ಲಿರುವ ರೂಪ ಜ್ಯೋತಿಃ ಎನಿಸಿದೆ. ಮೊದಲ ರೂಪವನ್ನು ಎರಡನೆಯ ರೂಪವು ಅನುಭವಿಸುತ್ತದೆ. ಅಪ್ ರೂಪದಲ್ಲಿ ಜ್ಯೋತಿರೂಪವು ನೆಲೆಸಿದೆ, ಜ್ಯೋತಿರೂಪದಲ್ಲಿ ಅಪ್ ರೂಪವು ನೆಲೆಸಿದೆ.

ಇದನ್ನು ಯಾರು ತಿಳಿಯುವನೋ ಅವನೂ ಅನ್ನನಾಮಕ ಪರಮಾತ್ಮನನ್ನು ಮುಕ್ತನಾಗಿ ಅನುಭವಿಸುವನು. ಶಿಷ್ಯಸಂತತಿ, ದ್ರವ್ಯಸಂಪತ್ತು, ಬ್ರಹ್ಮತೇಜಸ್ಸು ಇವುಗಳಿಂದ ಶ್ರೇಷ್ಠ ವ್ಯಕ್ತಿಯಾಗುತ್ತಾನೆ. ಕೀರ್ತಿಯಿಂದಲೂ ಎತ್ತರಕ್ಕೇರುತ್ತಾನೆ.

**ಆಪೋ ವಾ ಅನ್ನಂ, ಇತ್ಯಾದೇಃ ಪಾಗ್ವತ್ ಯೋಜನಾ, ಅಧ್ಯಾಹಾರಃ । ಅಪ್ಸು ಇತ್ಯಾದೇಃ ಅನ್ನತ್ವಾದಿವಿವೃತಿಪರತ್ವಂ, ಅಬಾದಿಪದಾನಾಂ ತನ್ನಿಷ್ಠ ಭಗವದ್ರೂಪ ಪರತ್ವಂ ಚ ಪ್ರಾಗ್ವತ್ ವ್ಯಾಖ್ಯೇಯಮ್ । ಏವಮಗ್ರೇಽಪಿ ।**

'ಆಪೋ ವಾ ಅನ್ನಂ' ಎಂದರೆ ಹಿಂದಿನಂತೆಯೇ ಅರ್ಥ - ಅಪ್‌ನಾಮಕ ಅಪ್ (ನೀರು) ಸ್ಥಿತವಾದ ರೂಪ ಅನ್ನನಾಮಕವಾಗಿದೆ, ಎಂದು. 'ಜ್ಯೋತಿರನ್ನಾದಂ' ಎಂದಿರುವಂತೆ 'ಆಪ ಅನ್ನಾದಾಃ' ಎಂದೂ ಸೇರಿಸಿಕೊಳ್ಳಬೇಕು. ಅದರಂತೆ 'ಅಪ್ಸು ಜ್ಯೋತಿಃ ಪ್ರತಿಷ್ಠಿತಂ' ಎಂಬುದು ಅಪ್ ಅನ್ನ ಹೇಗೆ, ಜ್ಯೋತಿಯು ಅನ್ನಾದ ಹೇಗೆ?

ಎನ್ನುವುದರ ವಿವರಣೆ ಎಂದೂ ತಿಳಿಯಬೇಕು. ಅರ್ಥಾತ್ ಅಬ್ರೂಪವನ್ನು ತನ್ನ ಸ್ಥಿತಿಗಾಗಿ ಜ್ಯೋತಿರೂಪವು ಅವಲಂಬಿಸಿರುವುದೇ ಅನ್ನ-ಅನ್ನಾದತ್ವ, ಇದು 'ಅಪ್ಸು ಜ್ಯೋತಿಃ ಪ್ರತಿಷ್ಠಿತಂ' ಎಂಬ ವಾಕ್ಯದಲ್ಲಿ ಹೇಳಿದ ವಿವರಣೆ.

'ಅಪ್' 'ಜ್ಯೋತಿಃ' ಎಂಬ ಪದಗಳಿಗೆ ನೀರಿನಲ್ಲಿ - ಜ್ಯೋತಿಯಲ್ಲಿ ಇರುವ ಪರಮಾತ್ಮನ ರೂಪ ಎಂದು ಅರ್ಥ. ಇದನ್ನು ಹಿಂದಿನಂತೆಯೇ ತಿಳಿಯುವುದು. ಮುಂದಿನ ಮಂತ್ರಗಳಲ್ಲೂ ಇದೇ ರೀತಿ ಅರ್ಥ.

**ಅನ್ನಂ ಬಹು ಕುರ್ವೀತ । ತದ್ ವ್ರತಮ್ । ಪೃಥಿವೀ ವಾ ಅನ್ನಮ್ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಮ್ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥ ೬ ॥**

ಅನ್ನನಾಮಕ ಪರಮಾತ್ಮನಲ್ಲಿ ಗುಣಪೂರ್ಣತ್ವ ಬುದ್ಧಿಯನ್ನು ತಾಳಬೇಕು. ಇದೇ ಬ್ರಹ್ಮಜ್ಞಾನಿಯ ದೀಕ್ಷೆಯಾಗಿರಬೇಕು.

ಪೃಥಿವೀಸ್ಥವಾದ ಪೃಥಿವೀನಾಮಕವಾದ ಪರಮಾತ್ಮನ ರೂಪ 'ಅನ್ನ' ಎನಿಸಿದೆ. ಆಕಾಶಸ್ಥರೂಪವು ಅನ್ನಾದ. ಅಂದರೆ ಪೃಥಿವೀಗತವಾದ ರೂಪವನ್ನು ಅದು ಅನುಭವಿಸುತ್ತದೆ. ಹೀಗೆಯೇ ಆಕಾಶರೂಪವನ್ನು ಪೃಥಿವೀರೂಪ ಅನುಭವಿಸುತ್ತದೆ-ಯಾದ್ದರಿಂದ ಆಕಾಶವು ಅನ್ನ, ಪೃಥಿವಿಯು ಅನ್ನಾದ.

ಪೃಥಿವಿಯಲ್ಲಿ ಆಕಾಶವೂ, ಆಕಾಶದಲ್ಲಿ ಪೃಥಿವಿಯೂ ನೆಲೆಗೊಂಡಿದೆ. ಆದ್ದರಿಂದಲೇ ಇವೆರಡೂ ಒಂದಕ್ಕೆ ಮತ್ತೊಂದು ಅನ್ನ-ಅನ್ನಾದಗಳಾಗಿವೆ.

ಹೀಗೆ ಈ ಎರಡು ರೂಪಗಳನ್ನು ಒಂದಕ್ಕೊಂದು ಭೋಗ್ಯವನ್ನಾಗಿ ಯಾರು ತಿಳಿಯುವನೋ ಅವನು ಅನ್ನಮಯರೂಪವನ್ನು ಮೋಕ್ಷದಲ್ಲಿ ಅನುಭವಿಸುತ್ತಾನೆ. ಶಿಷ್ಯಸಂಪತ್ತು ದ್ರವ್ಯ ಸಂಪತ್ತುಗಳಿಂದ ಬ್ರಹ್ಮವರ್ಚಸ್ಸಿನಿಂದಲೂ ಶ್ರೇಷ್ಠನಾಗುತ್ತಾನೆ. ಕೀರ್ತಿಯಿಂದಲೂ ಔನ್ನತ್ಯಗಳಿಸುತ್ತಾನೆ.

**ಅನ್ನಂ ಬಹುಕುರ್ವೀತೇತಿ ॥ ಮಹದಿತಿ ತತ್ರ ಬಹುಮಾನಬುದ್ಧಿಃ ಕಾರ್ಯಾ। ತದ್ಗುಣಾನ್ ತತ್ ಕರ್ಮಾಣಿ ವಾ ಬಹು ಕುರ್ವೀತ, ಇತಿ । ಬಹುಗುಣಕರ್ಮವತ್ತ್ವೇನ ಅನ್ನನಾಮಕಂ ಪ್ರತಿಪಾದಯೇತ್ ಇತಿ ಯಾವತ್ ॥ ೬ ॥**

ಅನ್ನಂ ಬಹು ಕುರ್ವೀತ ಎಂದರೆ ಪರಮಾತ್ಮನು ಸರ್ವೋತ್ತಮನೆಂದು ಅವನಲ್ಲಿ ಗೌರವ ಬುದ್ಧಿಯನ್ನು ತಾಳಬೇಕು ಎಂದರ್ಥ. ಅವನ ಗುಣಗಳು, ಅವನ ಕ್ರಿಯೆಗಳು ಅನಂತವೆಂದು ತಿಳಿಯಬೇಕು. ಅಂದರೆ ಪರಮಾತ್ಮ ಅನಂತ ಗುಣ-ಕ್ರಿಯೆಗಳಿಂದ ತುಂಬಿದ್ದಾನೆ. ಎಂದು ತಿಳಿಯಬೇಕು, ಎಂದರ್ಥ.॥ ೬ ॥

**ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ ವ್ರತಮ್ । ತಸ್ಮಾದ್ ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾ ಚಕ್ಷತೇ ।**

**ಏತದ್ವೈ ಮುಖತೋಽನ್ನꣳ ರಾದ್ಧಮ್ । ಮುಖತೋಽಸ್ಮಾ ಅನ್ನꣳ ರಾಧ್ಯತೇ । ಏತದ್ವೈ ಮಧ್ಯತೋಽನ್ನꣳ ರಾದ್ಧಮ್ । ಮಧ್ಯತೋಽಸ್ಮಾ ಅನ್ನꣳ ರಾಧ್ಯತೇ । ಏತದ್ವಾ ಅಂತತೋಽನ್ನꣳ ರಾದ್ಧಮ್ । ಅಂತತೋಽಸ್ಮಾ ಅನ್ನꣳ ರಾಧ್ಯತೇ । ಯ ಏವಂ ವೇದ ॥ ೭ ॥**

ವಿದ್ಯೆಯನ್ನು ಬಯಸಿ ಬಂದ ಯಾರಿಗೂ ಅವಕಾಶವಿಲ್ಲ ಎನ್ನಕೂಡದು. ಇದು ಬ್ರಹ್ಮಜ್ಞಾನಾಕಾಂಕ್ಷಿಯ ದೀಕ್ಷೆಯಾಗಿರಬೇಕು.

ಬ್ರಹ್ಮಜ್ಞಾನವು ಮೋಕ್ಷಹೇತುವಾದುದರಿಂದ ಅತಿಪ್ರಯತ್ನ ಮಾಡಿಯಾದರೂ ಬ್ರಹ್ಮನೇ ಶ್ರೇಷ್ಠನೆಂದು ತಿಳಿದು ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು. ಅನ್ನಾಖ್ಯ ಭಗವದ್ರೂಪವು ಗುಣ-ಕರ್ಮಗಳಿಂದ ಪೂರ್ಣ ಎಂದು ತಿಳಿದವನಿಗೆ ಆ ರೂಪವು ಒಲಿದು ಬರುತ್ತದೆ.

ಬಾಲ್ಯದಿಂದಾರಂಭಿಸಿ ಪರಮಾತ್ಮನ ಉಪಾಸನೆಯನ್ನು ಮಾಡಿದವನಿಗೆ ಪರಮಾತ್ಮನು ಅಡಿಯಿಂದ ಮುಡಿಯವರೆಗೆ ದರ್ಶನ ನೀಡುತ್ತಾನೆ. ಮಧ್ಯವಯಸ್ಸಿನಿಂದ ಉಪಾಸನೆಯನ್ನು ಮಾಡಿದರೆ ಪರಮಾತ್ಮನ ಮಧ್ಯಭಾಗ ಮಾತ್ರ ಕಂಡು ಉಳಿದ ಭಾಗ ತೇಜೋಮಯವಾಗಿ ಕಾಣುತ್ತದೆ. ಇಳಿವಯಸ್ಸಿನಲ್ಲಿ ಉಪಾಸನೆ ಮಾಡಿದರೆ ದೇವರ ಕಾಲು ಮಾತ್ರ ಕಾಣುತ್ತದೆ. ಹೀಗೆ ತಿಳಿದವನೂ ಭಗವದ್ದರ್ಶನ ಪಡೆಯುತ್ತಾನೆ.

**ನ ಕಂಚನ ವಸತಾಮಿತಿ ॥ ವಿದ್ಯಾರ್ಥಿತ್ವೇನ ಆಗತಸ್ಯ ವಸತೌ = ವಾಸವಿಷಯೇ, ಕಂಚನ = ಕಮಪಿ, ನ ಪ್ರತ್ಯಾಚಕ್ಷೀತ = ಪ್ರತ್ಯಾಖ್ಯಾನಂ ನ ಕಾರ್ಯಮ್ ಇತ್ಯರ್ಥಃ ।**

**ತಸ್ಮಾತ್ = ಜ್ಞಾತಸ್ಯ ಅನ್ನಸ್ಯ ಪ್ರತಿಷ್ಠಾ ಹೇತುತ್ವಾತ್, ಯಯಾ ಕಯಾ ಚ ವಿಧಯಾ = ಯೇನಕೇನಾಪಿ ವಿಧಿನಾ, ಅನ್ನಂ ಬಹು=ಬಹುತ್ವೇನ ಮತ್ವಾ ಪ್ರಾಪ್ನುಯಾತ್ ಅನ್ನಂ ಇತ್ಯರ್ಥಃ । ಅತಿಪ್ರಯತ್ನೇನಾಪಿ ವಿಹಿತಪ್ರಕಾರೇಣ ಬಹುತರಾಂ ಭಗವದ್ವಿದ್ಯಾಂ ಪ್ರಾಪ್ನುಯಾತ್ ಇತಿ ಯಾವತ್ ।**

'ನ ಕಂಚನ ವಸತೌ' ಎಂದರೆ ವಿದ್ಯಾರ್ಥಿಯಾಗಿ ಬಂದಿರುವವನಿಗೆ ವಸತೌ = ವಾಸ ವಿಷಯದಲ್ಲಿ ಕಂಚನ = ಯಾರೊಬ್ಬರಿಗೂ, ನ ಪ್ರತ್ಯಾಚಕ್ಷೀತ = ನಿರಾಕರಣೆಯನ್ನು ಮಾಡಬಾರದು. 'ನಿನಗೆ ಅವಕಾಶವಿಲ್ಲ' ಎಂದು ಹಿಂದಕ್ಕೆ ಕಳುಹಿಸಬಾರದು, ಎಂದರ್ಥ.

ತಸ್ಮಾತ್ ಎಂದರೆ ಅನ್ನನಾಮಕ ಪರಮಾತ್ಮನ ಜ್ಞಾನವು ಮೋಕ್ಷಕ್ಕೆ ಕಾರಣ ಎಂದು ಹಿಂದೆ ಹೇಳಿರುವ ಕಾರಣದಿಂದ, ಯಯಾ ಕಯಾ ಚ ವಿಧಯಾ = ಎಷ್ಟೇ ಪ್ರಯತ್ನ ಪಟ್ಟಾದರೂ ಅನ್ನನಾಮಕ ರೂಪವನ್ನು ಬಹು = ಗುಣಪೂರ್ಣವೆಂದು ತಿಳಿದು ಅದನ್ನು ಹೊಂದಬೇಕು. ಅತಿ ಪ್ರಯತ್ನವನ್ನು ಮಾಡಿಯಾದರೂ

ಶಾಸ್ತ್ರೋಕ್ತಕ್ರಮದಂತೆ ಪರಮಾತ್ಮನ ಜ್ಞಾನವನ್ನು ಅತಿಯಾಗಿ ಗಳಿಸಬೇಕು, ಎಂದು ಒಟ್ಟು ತಾತ್ಪರ್ಯ.

**ಅನ್ನಾಖ್ಯರೂಪಂ ಬಹುಮನ್ಯಮಾನಸ್ಯ ಅನ್ನಂ ಪ್ರಸೀದತ್ಯೇವ ಇತ್ಯಾಹ - ಅರಾಧೀತಿ ॥ ಅಸ್ಮೈ = ಅನ್ನಂ ಬಹು ಇತಿ ಮನ್ಯಮಾನಸ್ಯ । ಅನ್ನಂ = ಅನ್ನಾಖ್ಯಂ ಭಗವದ್ರೂಪಮ್ । ಅರಾಧಿ, "ರಾಧ-ಸಾಧ ಸಂ ಸಿದ್ಧೌ" ಸಿದ್ಧಂ ಭವತೀತಿ ವಿದ್ವಾಂಸಃ, ಆ ಚಕ್ಷತೇ = ಪ್ರಾಹುಃ ಇತ್ಯರ್ಥಃ ।**

ಅನ್ನವೆಂಬ ಹೆಸರಿನ ಈ ಭಗವದ್ರೂಪವು 'ಬಹು' ಎಂದು ತಿಳಿದರೆ ಆ ರೂಪವು ಪ್ರಸನ್ನವಾಗಿಯೇ ಆಗುತ್ತದೆ ಎಂದು 'ಅರಾಧಿ' ಎಂಬ ಮುಂದಿನ ವಾಕ್ಯದಲ್ಲಿ ಹೇಳಿದ್ದಾರೆ. ಅಸ್ಮೈ = ಅನ್ನ ರೂಪವು ಗುಣಪೂರ್ಣ (ಬಹು) ಎಂದು ತಿಳಿದವನಿಗೆ, ಅನ್ನಂ = ಅನ್ನಾಖ್ಯ ಭಗವಂತನು, ಅರಾಧಿ = ಸಿದ್ಧನಾಗುತ್ತಾನೆ, ಹೀಗೆಂದು, ತಿಳಿದವರು ಆಚಕ್ಷತೇ = ಹೇಳುತ್ತಾರೆ ಎಂದು ಅರ್ಥ. ಅರಾಧಿ ಎಂಬ ರೂಪವು 'ಸಿದ್ಧಿ' ಎಂಬ ಅರ್ಥದ ರಾಧ ಧಾತುವಿನಿಂದಾಗಿದೆ.

**ಭಗವದುಪಾಸನೇ ಪ್ರಯತ್ನಃ ಸದಾ ಕಾರ್ಯಃ ಇತಿ ಫಲಭೇದೋಕ್ತಿ ಪೂರ್ವಕಂ ಆಹ - ಏತದ್ವಾ ಇತಿ ॥ ಮುಖತಃ = ಉಪಕ್ರಮಾತ್ । ಲ್ಯಬ್ ಲೋಪ ನಿಮಿತ್ತಾ ಪಂಚಮೀ । ಬಾಲ್ಯಂ ಆರಭ್ಯ ಬಾಲ್ಯವಯಸಿ ಇತಿ ಯಾವತ್ । ಏತತ್ = ಅನ್ನಾಖ್ಯಂ ರೂಪಮ್ । ರಾದ್ಧಂ = ಸಿದ್ಧಮ್ । ತೀವ್ರೋಪಾಸನಯಾ ವಿಜ್ಞಾತಂ ಚೇತ್ ತದಾ ಅಸ್ಮೈ = ಉಪಾಸಕಾಯ, ಮುಖತಃ ಪಾದಮಾರಭ್ಯ ಅನ್ನಾಖ್ಯಂ ರೂಪಂ ರಾಧ್ಯತೇ = ಸಿಧ್ಯತಿ । ಪಾದೌ ಆರಭ್ಯ ಶಿರಃ ಪರ್ಯಂತಂ ಸರ್ವಾವಯವೋಪೇತಂ ರೂಪಂ ದೃಶ್ಯತೇ । ಅತೋ ಬಾಲ್ಯೇ ಏವ = ಪ್ರಥಮೇ ಏವ ವಯಸಿ ಪ್ರಯತ್ನಃ ಕಾರ್ಯಃ ಇತ್ಯರ್ಥಃ ।**

**ಮಧ್ಯತಃ = ಮಧ್ಯೇ ವಯಸಿ ಅನ್ನಂ ರಾದ್ಧಂ = ಉಪಾಸನಯಾ ಯೇನ ಜ್ಞಾತಮ್ ಅಸ್ಮೈ ಮಧ್ಯಾವಯವಃ ಹರೇಃ ಉಪಲಭ್ಯತೇ । ಅನ್ಯದಂಗ ಜಾತಂ ತೇಜೋಮಂಡಲವದೇವ ದೃಶ್ಯತೇ ನ ಸಮ್ಯಕ್ । ಏತತ್ = ಅನ್ನಂ, ಅಂತತಃ = ಚರಮವಯಸಿ ಯೇನ ರಾದ್ಧಂ = ಉಪಾಸನಯಾ ಜ್ಞಾತಮ್ ಅಸ್ಮೈ ಅಂತತಃ = ಪಾದಾವೇವ, ರಾಧ್ಯೇತೇ = ಸಿಧ್ಯತಃ । ಪಾದಾವೇವ ಉಪಲಭ್ಯೇತೇ ಅನ್ಯತ್ ಸರ್ವಂ ತೇಜೋ ಮಂಡಲವದೇವ ದೃಶ್ಯತೇ, ನ ತು ಸಮ್ಯಕ್ ಇತ್ಯರ್ಥಃ ।**

ಪರಮಾತ್ಮನ ಉಪಾಸನೆಯ ಪ್ರಯತ್ನವನ್ನು ಸರ್ವದಾ ಮಾಡಬೇಕು. ಇದನ್ನು ತಿಳಿಸಲು ಉಪನಿಷತ್ತು ಉಪಾಸನೆಯ ಫಲದಲ್ಲಿ ಆಗುವ ವ್ಯತ್ಯಾಸಗಳನ್ನು ಮುಂದಿನ ಭಾಗದಲ್ಲಿ ತಿಳಿಸುತ್ತಿದೆ.

ಇಲ್ಲಿ ಮುಖತಃ ಎಂದರೆ ಮುಖಾತ್. ಈ ಪಂಚಮೀ ವಿಭಕ್ತಿ 'ಆರಭ್ಯ' ಎಂಬ ಲ್ಯಬಂತವಾದ ಅವ್ಯಯವು ಲೋಪವಾಗಿರುವ ನಿಮಿತ್ತದಿಂದ ಬಂದಿದೆ. ಆದ್ದರಿಂದ 'ಮುಖಂ ಆರಭ್ಯ' ಎಂದರ್ಥ. ಮುಖ ಎಂದರೆ ಬಾಲ್ಯ. ಒಟ್ಟಿನಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಎಂದು ಭಾವ. ಆದ್ದರಿಂದ ಚಿಕ್ಕ ವಯಸ್ಸಿನಲ್ಲೇ, ಏತತ್ = ಈ ಅನ್ನಾಖ್ಯ ಭಗವದ್ರೂಪವು ರಾದ್ಧಂ = ಸಿದ್ಧವಾದರೆ, ಕಠಿಣ ಉಪಾಸನೆಯಿಂದ ತಿಳಿಯಲ್ಪಟ್ಟರೆ, ಆಗ, ಅಸ್ಮೈ = ಅಂತಹ ಸಾಧಕನಿಗೆ ಮುಖತಃ = ಪಾದದಿಂದ ಹಿಡಿದು ಮುಖದವರೆಗೆ ಸಮಗ್ರವಾಗಿ ಅನ್ನನಾಮಕ ರೂಪವು ಕಾಣಿಸುತ್ತದೆ. ಸರ್ವಾಂಗ ಪೂರ್ಣವಾಗಿ ಪರಮಾತ್ಮನು ಮೈದೋರುತ್ತಾನೆ ಎಂದರ್ಥ. ಆದ್ದರಿಂದ ಬಾಲ್ಯದಿಂದಲೇ ಉಪಾಸನೆಯ ಪ್ರಯತ್ನವನ್ನು ಮಾಡಬೇಕು, ಎಂದು ತಾತ್ಪರ್ಯ.

ಮಧ್ಯತಃ = ಮಧ್ಯವಯಸ್ಸಿನಲ್ಲಿ ಅನ್ನಾಖ್ಯರೂಪವು, ರಾದ್ಧಂ = ಯಾವ ಸಾಧಕನಿಂದ ಉಪಾಸನೆ ಮಾಡಿ ತಿಳಿಯಲ್ಪಟ್ಟರೆ ಅಂತಹವನಿಗೆ ಶ್ರೀಹರಿಯ ಮಧ್ಯಭಾಗವಷ್ಟೇ ಕಾಣುತ್ತದೆ. ಇತರ ಅಂಗಗಳು ಬರೀ ತೇಜಃ ಸಮೂಹವಾಗಿ ಕಾಣುತ್ತದೆ, ಸ್ಫುಟವಾಗಿ ಕಾಣುವುದಿಲ್ಲ.

ಏತತ್ = ಈ ಅನ್ನಾಖ್ಯರೂಪವು ಅಂತತಃ = ಕೊನೆಯ ವಯಸ್ಸಿನಲ್ಲಿ ಯಾವ ಉಪಾಸಕನಿಗೆ, ರಾದ್ಧಂ = ಉಪಾಸನೆಯಿಂದ ತಿಳಿಯಲ್ಪಡುತ್ತದೋ ಅಂತಹವನಿಗೆ ಅಂತತಃ = ಕೇವಲ ಪಾದಗಳಷ್ಟೇ ರಾಧ್ನೋತೇ = ಕಾಣಸಿಗುತ್ತವೆ. ಅಂತಹ ಸಾಧಕನು ಪರಮಾತ್ಮನ ಪಾದಗಳನ್ನಷ್ಟೇ ಕಾಣುತ್ತಾನೆ, ಇತರ ಅವಯವಗಳು ತೇಜಃ ಪುಂಜವಾಗಿ ಕಾಣುತ್ತವೆ, ಸ್ಪಷ್ಟವಾಗಿ ಕಾಣಿಸುವುದಿಲ್ಲ.

**ಏತತ್-ಜ್ಞಾನಿನೋಽಪಿ ಅನ್ನಾಖ್ಯರೂಪಸಿದ್ಧಿಃ ಫಲಂ ಇತ್ಯಾಹ - ಯ ಏವಂ ವೇದ ಇತಿ ॥ ಏವಂ = ಪ್ರಥಮಾದಿ ವಯಸ್ಯೇವ ಪ್ರಯತಮಾನಸ್ಯ ಉಕ್ತರೂಪ ಭಗವದ್ ದೃಷ್ಟಿಪ್ರಕಾರಂ, ಯೋ = ಅಧಿಕಾರೀ ವೇದ, ಸೋಽಪಿ ಭಗವದುಪಾಸನಯಾ ತದ್ದೃಷ್ಟಿಂ ಲಭತೇ ಇತಿ ಯೋಜ್ಯಮ್ ॥ ೭ ॥**

ಹಿಂದೆ ಹೇಳಿದಂತೆ ಬೇರೆ ಬೇರೆ ವಯಸ್ಸಿನಲ್ಲಿ ಮಾಡಿದ ಉಪಾಸನೆಗೆ ಅನುಗುಣವಾಗಿ ಭಗವದ್ದರ್ಶನವಾಗುತ್ತದೆ ಎಂದು ತಿಳಿದರೂ ಅನ್ನಮಯ ರೂಪವು ಪ್ರತ್ಯಕ್ಷವಾಗುತ್ತದೆ ಎಂದು 'ಯ ಏವಂ ವೇದ' ಎಂಬ ವಾಕ್ಯದಲ್ಲಿ ಹೇಳಲಾಗಿದೆ.

ಏವಂ ಎಂದರೆ ಬಾಲ್ಯ ಮುಂತಾದ ವಯಸ್ಸಿನಲ್ಲಿ ಉಪಾಸನೆ ಮಾಡಿದಾಗ ದೊರೆಯುವ ಫಲದ ವ್ಯತ್ಯಾಸ ಕ್ರಮವನ್ನು ಯಃ = ಯಾವ ಅರ್ಹ ಸಾಧಕನು ತಿಳಿಯುವನೋ ಅಂತಹವನೂ ಪರಮಾತ್ಮನ ಉಪಾಸಕನಾದರೆ ಅವನ ಅಪರೋಕ್ಷವನ್ನು ಪಡೆಯುತ್ತಾನೆ. ॥ ೭ ॥

**ಭಗವದುಪಾಸ್ಯಂತರಾಣ್ಯಾಹ – ಕ್ಷೇಮ ಇತಿ ॥**

ಇನ್ನೂ ಅನೇಕ ವಿಧದ ಭಗವಂತನ ಉಪಾಸನೆಯ ಕ್ರಮಗಳನ್ನು 'ಕ್ಷೇಮ ಇತಿ' ಎಂಬ ಮುಂದಿನ ಭಾಗದಲ್ಲಿ ಹೇಳಲಾಗಿದೆ.

**ಕ್ಷೇಮ ಇತಿ ವಾಚಿ । ಯೋಗಕ್ಷೇಮ ಇತಿ ಪ್ರಾಣಾಪಾನಯೋಃ ।**

**ಕರ್ಮೇತಿ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿ**

**ಪಾಯೌ । ಇತಿ ಮಾನುಷೀಃ ಸಮಾಜ್ಞಾಃ ।**

**ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ । ಯಶ ಇತಿ**

**ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತಮಾನಂದ**

**ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ ॥ ೮ ॥**

ಆ ಪರಮಾತ್ಮನು ನಮ್ಮ ನಾಲಿಗೆಯಲ್ಲಿ ನಮ್ಮ ಹಿತ ಚಿಂತಕನಾಗಿ ಇರುವುದರಿಂದ ಅವನಿಗೆ ಕ್ಷೇಮ ಎಂಬ ಹೆಸರಿನಿಂದ ಇದ್ದಾನೆಂದು ಉಪಾಸನೆ ಮಾಡಬೇಕು. ಪ್ರಾಣವಾಯುವಿನಲ್ಲಿದ್ದು ನಮಗೆ ಬೇಕಾದುದನ್ನು ಒದಗಿಸಿ ಕೊಡುವುದರಿಂದ 'ಯೋಗ' ಎನಿಸಿದ್ದಾನೆ ಎಂದು ಉಪಾಸಿಸಬೇಕು. ಅಪಾನವಾಯುವಿನಲ್ಲಿ ಸನ್ನಿಹಿತನಾಗಿ ನಮಗೆ ಕ್ಷೇಮವನ್ನು ಬಯಸುವುದರಿಂದ

ಕ್ಷೇಮನೆನಿಸಿದ್ದಾನೆ ಎಂದು ಉಪಾಸನೆ ಮಾಡಬೇಕು. ನಡಿಗೆಯ ಶಕ್ತಿಪ್ರದನಾದುದರಿಂದ 'ಗತಿ' ಎಂಬ ಹೆಸರಿನಿಂದ ಪಾದಗಳಲ್ಲೂ ಕ್ರಿಯಾಪ್ರದನಾದುದರಿಂದ ಕರ್ಮ ಎಂಬ ಹೆಸರಿನಿಂದ ಕೈಗಳಲ್ಲೂ ಇದ್ದಾನೆ ಎಂದು ಉಪಾಸಿಸಬೇಕು. ನಮ್ಮ ದೇಹದ ತ್ಯಾಜ್ಯ ವಸ್ತುವನ್ನು ಹೊರಹಾಕುವ ಕಾರಣ 'ವಿಮುಕ್ತಿ' ಎಂದೆನಿಸಿ ಮಲ ವಿಸರ್ಜನಾಂಗದಲ್ಲಿ ಇದ್ದಾನೆ ಎಂದು ಉಪಾಸನೆ ಮಾಡಬೇಕು. ಇವಿಷ್ಟು ಮನುಷ್ಯದೇಹಕ್ಕೆ ಸಂಬಂಧಿಸಿದಂತೆ ಉಪಾಸನೆಗಳು.

ಅಂತರಿಕ್ಷಲೋಕಕ್ಕೆ ಸಂಬಂಧಿಸಿದ ಉಪಾಸನೆಗಳು ಇವು. ತೃಪ್ತಿದಾಯಕನಾದ ಕಾರಣ ತೃಪ್ತಿ ಎಂಬ ಹೆಸರಿನಿಂದ ಮಳೆಗೆ ಅಭಿಮಾನಿಯಾದ ಪರ್ಜನ್ಯನಲ್ಲಿ ಭಗವಂತನನ್ನು ಕಾಣಬೇಕು. ಬಲಪ್ರದನಾದುದರಿಂದ ಬಲ ಎಂಬ ಹೆಸರಿನಿಂದ ಮಿಂಚಿಗೆ ಅಭಿಮಾನಿಯಾದ ವಾಯುವಿನಲ್ಲಿ ದೇವರನ್ನು ತಿಳಿಯಬೇಕು. ಕೀರ್ತಿಪ್ರದನಾದುದರಿಂದ 'ಯಶಃ' ಎಂಬ ಹೆಸರಿನಿಂದ ಯಜ್ಞಪಶುಗಳಿಗೆ ಅಭಿಮಾನಿಯಾದ ದಕ್ಷ ಪ್ರಜಾಪತಿಯಲ್ಲಿ ಭಗವಂತನಿದ್ದಾನೆ. ಪ್ರಕಾಶದಾಯಕನಾಗಿ ಜ್ಯೋತಿಃ ಎಂಬ ಹೆಸರಿನಿಂದ ನಕ್ಷತ್ರಗಳಲ್ಲಿ ಭಗವಂತನಿದ್ದಾನೆ, ಎಂದು ಉಪಾಸನೆ ಮಾಡಬೇಕು. ಪ್ರಜಾಸಂತತಿಯನ್ನು ಅನುಗ್ರಹಿಸುವುದರಿಂದ ಪ್ರಜಾತಿ, ಅಮೃತ ಎಂದೆನಿಸಿ ಹಾಗೂ ಸುಖಪ್ರದನಾದುದರಿಂದ ಆನಂದ ಎಂದೆನಿಸಿ ಮೂತ್ರ ವಿಸರ್ಜನಾಂಗಕ್ಕೆ ಅಭಿಮಾನಿಯಾದ ಶಿವನಲ್ಲಿ ಇದ್ದಾನೆ ಎಂದು ಉಪಾಸಿಸಬೇಕು. ಸರ್ವಪ್ರದನಾದುದರಿಂದ ಸರ್ವ ಎಂದೆನಿಸಿ ಜಡಪ್ರಕೃತಿಯಲ್ಲಿದ್ದಾನೆ ಎಂದು ಉಪಾಸನೆ ಮಾಡಬೇಕು.

**ವಾಚಿ = ವಾಗಿಂದ್ರಿಯೇ ಕ್ಷೇಮಕೃತ್ವ ಹೇತುನಾ ಕ್ಷೇಮನಾಮಕಃ ಹರಿಃ, ಅಸ್ತೀತಿ ಉಪಾಸೀತ ಇತಿ ಸರ್ವತ್ರ, ಯೋಜ್ಯಮ್ । ಕಾಮ್ಯಯೋಜಕತ್ವ ಹೇತುನಾ ಯೋಗನಾಮಾ ದೇಹಗತ ಪ್ರಾಣೇ, ಕ್ಷೇಮಕೃತ್ವೇನ ಕ್ಷೇಮನಾಮಾ ಅಪಾನೇ, ಕರ್ಮಕೃತ್ವೇನ ಕರ್ಮನಾಮಾ ಹಸ್ತಯೋಃ, ಗತಿದತ್ವೇನ ಗತಿನಾಮಾ ಪಾದಯೋಃ, ವಿಸರ್ಗಕೃತ್ವೇನ ವಿಮುಕ್ತ್ಯಾಖ್ಯಃ ಪಾಯೌ ಅಸ್ತೀತಿ ಉಪಾಸೀತ ಇತ್ಯರ್ಥಃ । ಇತಿ ಮಾನುಷೀಃ = ಮನುಷ್ಯ ದೇಹ ಸಂಬಂಧಿನ್ಯಃ ಉಪಾಸ್ತಯಃ ಉಕ್ತಾಃ ಇತ್ಯರ್ಥಃ ।**

ವಾಚಿ = ನಾಲಿಗೆಯಲ್ಲಿ, ಕ್ಷೇಮ ಚಿಂತಕನಾದುದರಿಂದ ಕ್ಷೇಮ ಎಂಬ ಹೆಸರಿನ ಶ್ರೀಹರಿ ಇದ್ದಾನೆ, ಎಂದು ಉಪಾಸನೆ ಮಾಡಬೇಕು. ಮುಂದಿನ ಎಲ್ಲ ವಾಕ್ಯಗಳಲ್ಲೂ 'ಅಸ್ತೀತಿ ಉಪಾಸೀತ' ಎಂದು ಸೇರಿಸಿಕೊಳ್ಳಬೇಕು. ನಮಗೆ ಅಭೀಷ್ಟಗಳನ್ನು

ಪೂರೈಸುವ ಕಾರಣದಿಂದ ಯೋಗ ಎಂದೆನಿಸಿ ದೇಹದಲ್ಲಿರುವ ಪ್ರಾಣವಾಯುವಿನಲ್ಲಿದ್ದಾನೆ. ಕ್ಷೇಮನಾಮಕನಾಗಿ ಅಪಾನವಾಯುವಿನಲ್ಲಿದ್ದಾನೆ. ಕ್ರಿಯಾಪ್ರದನಾದುದರಿಂದ 'ಕರ್ಮ' ಎಂಬ ಹೆಸರಿನಿಂದ ಕೈಗಳಲ್ಲಿದ್ದಾನೆ. ನಡಿಗೆಯನ್ನು ಉಂಟು ಮಾಡಿ ಗತಿ ಎಂಬ ಹೆಸರಿನಿಂದ ಕಾಲುಗಳಲ್ಲಿದ್ದಾನೆ. ವಿಸರ್ಜನಕ್ರಿಯಾಕಾರಕನಾಗಿ ವಿಸರ್ಗ ಎಂದೆನಿಸಿ ಮಲವಿಸರ್ಜನಾಂಗದಲ್ಲಿದ್ದಾನೆ. ಇದು ಮಾನುಷೀಃ = ಮನುಷ್ಯ ದೇಹಕ್ಕೆ ಸಂಬಂಧಿಸಿರುವ ಉಪಾಸನೆಗಳು.

**ಅಥೇತಿ ಅರ್ಥಾಂತರೇ – ದೈವೀಃ – ದೈವ್ಯಃ, ಸಮಾಜ್ಞಾಃ ಇತ್ಯನುಷಂಗಃ, ಉಚ್ಯಂತೇ ಇತಿ ಶೇಷಃ । ತೃಪ್ತಿಪ್ರದತ್ವೇನ ತೃಪ್ತಿನಾಮಾ ಹರಿಃ ವೃಷ್ಟೌ = ವೃಷ್ಟ್ಯಭಿಮಾನಿನಿ ಪರ್ಜನ್ಯೇ, ಅಸ್ತೀತಿ ಉಪಾಸೀತ ಇತಿ ಶೇಷಃ । ಏವಂ ಅಗ್ರೇಽಪಿ । ಬಲದತ್ವೇನ ಬಲನಾಮಾ, ವಿದ್ಯುತಿ = ವಿದ್ಯುದಭಿಮಾನಿನಿ ವಾಯೌ । ಯಶಃ = ಯಶಃ ಪ್ರದತ್ವ ಹೇತುನಾ ಯಶೋ ನಾಮಾ ಪಶುಷು, ಯಜ್ಞಪಶ್ವಭಿಮಾನಿನಿ ದಕ್ಷ ಪ್ರಜಾಪತೌ । ಜ್ಯೋತಿಃ ಪ್ರದತ್ವೇನ ಜ್ಯೋತಿರಾಖ್ಯಃ ನಕ್ಷತ್ರೇಷು । ಪ್ರಜಾತಿಃ = ಪುತ್ರಃ, ಅಮೃತಂ = ಸಂತತಿ ಪರಂಪರಾ, ಆನಂದಃ = ಸುಖಂ, ಪ್ರಜಾ-ಸಂತತಿ ಆನಂದಾನಾಂ ದಾತೃತ್ವಾತ್ ಪ್ರಜಾತಿಃ ಇತ್ಯಾದಿನಾಮಕಃ ಸನ್, ಉಪಸ್ಥೇ = ಉಪಸ್ಥಾಭಿಮಾನಿನಿ ಶಿವೇ ಅಸ್ತೀತ್ಯರ್ಥಃ । ಸರ್ವದತ್ವೇನ ಸರ್ವನಾಮಾ ಸನ್, ಆಕಾಶೇ = ಪ್ರಕೃತೌ ಅಸ್ತೀತ್ಯರ್ಥಃ ॥ ೮ ॥**

'ಅಥ ದೈವೀಃ' ಇಲ್ಲಿ ಅಥ ಶಬ್ದವು ಬೇರೊಂದು ವಿಷಯವನ್ನು ನಿರೂಪಿಸಲಾಗಿದೆ ಎಂದು ತಿಳಿಸುತ್ತದೆ. 'ದೈವೀಃ' ಎಂಬ ದ್ವಿತೀಯಾಂತವನ್ನು 'ದೈವ್ಯಃ' ಎಂದು ಪ್ರಥಮಾಂತವನ್ನಾಗಿ ಪರಿಗಣಿಸಬೇಕು. 'ಸಮಾಜ್ಞಾಃ' ಎಂಬ ಶಬ್ದವನ್ನು 'ಮಾನುಷಿಃ ಸಮಾಜ್ಞಾಃ' ಎಂಬ ಹಿಂದಿನ ವಾಕ್ಯದಿಂದ ಅನ್ವಯಿಸಿಕೊಳ್ಳಬೇಕು. 'ಉಚ್ಯಂತೇ' ಎಂಬ ಶಬ್ದವನ್ನು ಸೇರಿಸಿಕೊಳ್ಳಬೇಕು. ಅಧಿದೈವಕ್ಕೆ ಸಂಬಂಧಿಸಿದಂತೆ ಭಗವದುಪಾಸನೆಯ ಕ್ರಮವನ್ನು ಹೇಳಲಾಗುತ್ತದೆ, ಎಂದು ಅರ್ಥ.

'ತೃಪ್ತಿರಿತಿ ವೃಷ್ಟೌ' ಇಲ್ಲಿ ತೃಪ್ತಿ ಎಂದರೆ ತೃಪ್ತಿಪ್ರದನಾದ 'ತೃಪ್ತಿ' ಎಂಬ ಹೆಸರಿನ ಭಗವದ್ರೂಪ. ಅದು ವೃಷ್ಟೌ = ಮಳೆಗೆ ಅಭಿಮಾನಿದೇವತೆಯಾದ ಪರ್ಜನ್ಯನಲ್ಲಿ ಇದೆ, ಎಂದು ಉಪಾಸನೆ ಮಾಡಬೇಕು. ಇಲ್ಲಿ, 'ಅಸ್ತೀತಿ ಉಪಾಸೀತ' ಎಂಬ ಪದಗಳನ್ನು ಸೇರಿಸಿಕೊಳ್ಳಬೇಕು. ಇದೇ ರೀತಿ ಮುಂದಿನ ಎಲ್ಲಾ ವಾಕ್ಯಗಳಲ್ಲೂ ಈ ಎರಡು ಪದಗಳನ್ನು ಸೇರಿಸಿಕೊಳ್ಳಬೇಕು.

ಬಲ ಪ್ರದನಾದುದರಿಂದ ಬಲ ಎಂಬ ಹೆಸರಿನಲ್ಲಿ ವಿದ್ಯುತಿ = ಮಿಂಚಿಗೆ ಅಭಿಮಾನಿಯಾದ ವಾಯುದೇವನಲ್ಲಿ ಇದ್ದಾನೆಂದು ಉಪಾಸನೆ ಮಾಡಬೇಕು. ಯಶಃ = ಕೀರ್ತಿದಾಯಕನಾದುದರಿಂದ ಯಶಃ ಎಂಬ ಹೆಸರಿನಿಂದ, ಪಶುಷು = ಯಜ್ಞ ಪಶುಗಳಿಗೆ ಅಭಿಮಾನಿಯಾದ ದಕ್ಷ ಪ್ರಜಾಪತಿಯಲ್ಲಿ ಇದ್ದಾನೆ. ಪ್ರಕಾಶವನ್ನು ನೀಡುವ ಕಾರಣದಿಂದಾಗಿ ಜ್ಯೋತಿಃ ಎಂಬ ಹೆಸರಿನಿಂದ ನಕ್ಷತ್ರಗಳಲ್ಲಿ ಇದ್ದಾನೆ. 'ಪ್ರಜಾತಿರಮೃತಮಾನಂದಃ' ಎಂಬ ಪದದಲ್ಲಿ ಪ್ರಜಾತಿ ಎಂದರೆ ಮಕ್ಕಳು. ಅಮೃತ ಎಂದರೆ ಮೊಮ್ಮಕ್ಕಳು ಹಾಗೂ ಮುಂದಿನ ಸಂತತಿ. ಆನಂದ ಎಂದರೆ ಸುಖ. ಈ ಮೂರನ್ನು ನೀಡುವುದರಿಂದಾಗಿ ಪ್ರಜಾತಿ, ಅಮೃತ, ಆನಂದ ಈ ಹೆಸರುಗಳಿಂದ ಉಪಸ್ಥೇಂದ್ರಿಯಕ್ಕೆ ಅಭಿಮಾನಿಯಾದ ರುದ್ರದೇವನಲ್ಲಿದ್ದಾನೆ. ಸರ್ವವನ್ನೂ ಕೊಡುವುದರಿಂದ 'ಸರ್ವ' ನಾಮಕನಾಗಿ ಆಕಾಶೇ = ಆಕಾಶದಂತೆ ನಿರ್ವಿಕಾರಳಾದ ಪ್ರಕೃತಿಯಲ್ಲಿ ಇದ್ದಾನೆ.

ಹೀಗೆ ಆಯಾಯಾ ಸ್ಥಾನಗಳಲ್ಲಿ ಆ ಹೆಸರಿನ ಭಗವದ್ರೂಪಗಳನ್ನು ಉಪಾಸನೆ ಮಾಡಬೇಕು ॥ ೮ ॥

**ಪ್ರಕೃತೌ ಸ್ಥಿತಸ್ಯ ಗುಣಾನಾಹ – ತತ್ ಪ್ರತಿಷ್ಠೇತಿ ॥**

ಆಕಾಶವೆಂದು ಹಿಂದೆ ಪ್ರಸ್ತುತವಾದ ಪ್ರಕೃತಿಯಲ್ಲಿ ಸನ್ನಿಹಿತನಾದ ಪರಮಾತ್ಮನ ಗುಣಗಳನ್ನು ಮುಂದಿನ ಉಪನಿಷತ್ತಿನಲ್ಲಿ ಹೇಳಲಾಗಿದೆ.

**ತತ್ ಪ್ರತಿಷ್ಠೇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ ಭವತಿ । ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತದ್ ಬ್ರಹ್ಮಣಃ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿ ಯೇಽ ಪ್ರಿಯಾ ಭ್ರಾತೃವ್ಯಾಃ ॥ ೯ ॥**

ಆ ಬ್ರಹ್ಮನು ದೇವತೆಗಳನ್ನು ಅವರವರ ಪದವಿಯಲ್ಲಿ ಕೂಡಿಸಿರುವುದರಿಂದ 'ಪ್ರತಿಷ್ಠಾ' ಎನಿಸಿದ್ದಾನೆ. ಹೀಗೆ ಅವನನ್ನು ಉಪಾಸನೆ ಮಾಡುವುದರಿಂದ ಉಪಾಸಕನೂ ಉತ್ತಮ ಸ್ಥಿತಿಯನ್ನು ಗಳಿಸುತ್ತಾನೆ. ಆಕಾಶಸ್ಥ ಬ್ರಹ್ಮನು ಮಹತ್ವಗುಣಭರಿತನಾದುದರಿಂದ 'ಮಹಃ' ಎನಿಸಿದ್ದಾನೆ. ಹೀಗೆ ಉಪಾಸನೆ ಮಾಡುವುದರಿಂದ ಜ್ಞಾನದಿಂದ ಮಹತ್ವವನ್ನು ಗಳಿಸಬಹುದು. ಆ ಬ್ರಹ್ಮನು ಮಾನ್ಯನಾದುದರಿಂದ 'ಮನಃ' ಎನಿಸಿದ್ದಾನೆ. ಹೀಗೆ ಉಪಾಸನೆ ಮಾಡುವವನು ಪೂಜ್ಯತೆಯನ್ನು ಗಳಿಸುತ್ತಾನೆ. ಆ ಬ್ರಹ್ಮನು ಸರ್ವವಂದ್ಯನಾದುದರಿಂದ 'ನಮಃ' ಎನಿಸಿದ್ದಾನೆ. ಹೀಗೆ ಉಪಾಸನೆ ಮಾಡುವವನಿಗೆ ಬಯಸಿದ್ದೆಲ್ಲವೂ ಒದಗುವುದು. ಆ ಪರಮಾತ್ಮನನ್ನು 'ಪೂರ್ಣ' ಎಂದು ಉಪಾಸನೆ ಮಾಡಬೇಕು. ಹಾಗೆ ಉಪಾಸನೆ ಮಾಡಿದರೆ ಬ್ರಹ್ಮನು ಅವನನ್ನು ರಕ್ಷಿಸುತ್ತಾನೆ, ತನ್ನ ಯೋಗ್ಯತೆಗೆ ತಕ್ಕಂತೆ ಸಾಧಕನು ಪೂರ್ಣತೆಯನ್ನೂ ಪಡೆಯುತ್ತಾನೆ. ಪರಮಾತ್ಮನು ಚತುರ್ಮುಖ ಬ್ರಹ್ಮನಿಗೆ ಮೃತ್ಯು ಎಂದು ಉಪಾಸನೆ ಮಾಡಬೇಕು. ಅದರಿಂದ ನಮ್ಮ ಸುತ್ತಲೂ ನಮ್ಮನ್ನು ದ್ವೇಷಿಸುವ ಶತ್ರುಗಳು ಹಾಗೂ ನಮ್ಮೊಳಗಿರುವ ಕಾಮಕ್ರೋಧಾದಿ ಶತ್ರುಗಳೂ ನಾಶ ಹೊಂದುತ್ತಾರೆ.

**ತತ್ ಸ್ಥಾಪಕತ್ವೇನ ಹೇತುನಾ ಪ್ರತಿಷ್ಠಾ ಇತ್ಯುಪಾಸೀತ । ಪ್ರತಿಷ್ಠಾವಾನ್ ಭವತಿ = ಸ್ಥಿತಿಮಾನ್ ಭವತಿ । ತತ್, ಮಹಃ = ಮಹತ್ವಗುಣಯುಕ್ತತ್ವಾತ್ ಮಹಃ ಇತಿ ಉಪಾಸೀತ । ಸ ಜ್ಞಾನಾದಿನಾ ಮಹಾನ್ ಭವತಿ । ತತ್ ಮಾನ್ಯತ್ವ ಹೇತುನಾ ಮನ ಇತಿ ಉಪಾಸೀತ । ಮಾನವಾನ್ ಭವತಿ = ಪೂಜ್ಯೋ ಭವತಿ ಇತ್ಯರ್ಥಃ । ತತ್ ನಮ್ಯತ್ವ ಹೇತುನಾ ನಮ ಇತಿ ಉಪಾಸೀತ । ಕಾಮಾಃ = ಕಾಮ್ಯಮಾನಾಃ ಅರ್ಥಾಃ ಅಸ್ಮೈ ನಮ್ಯಂತೇ-ನಮಂತಿ ಆಯಾಂತೀತ್ಯರ್ಥಃ ।**

**ತತ್ = ಆಕಾಶೇ ಸ್ಥಿತಂ, ಬ್ರಹ್ಮೇತಿ = ಪೂರ್ಣಮಿತಿ ಉಪಾಸೀತ । ಬ್ರಹ್ಮವಾನ್ = ರಕ್ಷಕತ್ವೇನ ತದ್ವಾನ್ ವಾ ಸ್ವಯೋಗ್ಯ ಪೂರ್ತಿಮಾನ್ ವಾ ಭವತಿ ಇತ್ಯರ್ಥಃ ।**

ಆಕಾಶಸ್ಥಿತನಾದ ಬ್ರಹ್ಮನು (ದೇವತೆಗಳನ್ನು ಅವರ ಪದವಿಯಲ್ಲಿ) ಸ್ಥಾಪಕನಾದ ಕಾರಣದಿಂದ 'ಪ್ರತಿಷ್ಠಾ' ಎನಿಸಿದ್ದಾನೆ, ಎಂದು ಉಪಾಸನೆ ಮಾಡಬೇಕು. ಇದರಿಂದ ಉಪಾಸಕನು ಉತ್ತಮ ಸ್ಥಿತಿಯನ್ನು ಹೊಂದುತ್ತಾನೆ. ಆ ಬ್ರಹ್ಮನು ಮಹತ್ವ ಗುಣ ಉಳ್ಳದ್ದು. ಆದ್ದರಿಂದ 'ಮಹಃ' ಎಂದು ಉಪಾಸನೆ ಮಾಡಬೇಕು. ಇದರಿಂದ ಸಾಧಕನೂ ಜ್ಞಾನದಿಂದ ಮಹತ್ವವನ್ನು ಗಳಿಸುತ್ತಾನೆ. ಆ ಬ್ರಹ್ಮನು ಮಾನ್ಯನಾದುದರಿಂದ 'ಮನಃ' ಎನಿಸಿದ್ದಾನೆ ಎಂದು ಉಪಾಸನೆ ಮಾಡಬೇಕು. ಇದರಿಂದ ಸಾಧಕನೂ ಪೂಜ್ಯತೆಯನ್ನು ಗಳಿಸುತ್ತಾನೆ. ಬ್ರಹ್ಮನು ವಂದ್ಯನಾದುದರಿಂದ 'ನಮಃ' ಎನಿಸಿದ್ದಾನೆ ಎಂದು ಉಪಾಸನೆ ಮಾಡಬೇಕು. ಅವನಿಗೆ ಎಲ್ಲ ಕಾಮಾಃ =

ಅಭೀಷ್ಟಗಳು, ನಮ್ಯಂತೇ = ನಮಸ್ಕರಿಸುತ್ತವೆ, ಅವನೆಡೆಗೆ ಹರಿದು ಬರುತ್ತವೆ. ಆಕಾಶಸ್ಥನಾದ ಆ ಬ್ರಹ್ಮನು ಪೂರ್ಣ ಎಂದು ಉಪಾಸನೆ ಮಾಡಿದರೆ ಅವನಿಗೆ ಬ್ರಹ್ಮನು ಸದಾ ರಕ್ಷಕನಾಗಿರುತ್ತಾನೆ ಅಥವಾ, ತನ್ನ ಯೋಗ್ಯತೆಗೆ ತಕ್ಕಂತೆ ಸಾಧಕನೂ ಪೂರ್ಣನಾಗುತ್ತಾನೆ.

**ತತ್ ಆಕಾಶಸ್ಥಂ, ಬ್ರಹ್ಮಣಃ = ವಿರಿಂಚಸ್ಯ, ಪರಿಮರಃ = ಮಾರಕಃ ಇತಿ ಉಪಾಸೀತ । ಏನಂ ಪರಿ = ಪರಿತಃ ಸ್ಥಿತಾಃ, ದ್ವಿಷಂತಃ ಸಪತ್ನಾಃ = ಬಾಹ್ಯಶತ್ರವಃ, ಮ್ರಿಯಂತೇ = ಪ್ರಾಣಾನ್ ಜಹತಿ । ಯೇ, ಅಪ್ರಿಯಾಃ ಭ್ರಾತೃವ್ಯಾಃ = ದೇಹಸ್ಥಿತಶತ್ರವಃ ಕಾಮಕ್ರೋಧಾದ್ಯಾಃ ತೇಽಪಿ ಮ್ರಿಯಂತೇ ॥ ೯ ॥**

ತತ್ = ಆಕಾಶಸ್ಥಿತನಾದ ಬ್ರಹ್ಮನು, ಬ್ರಹ್ಮಣಃ = ಚತುರ್ಮುಖ ಬ್ರಹ್ಮನಿಗೆ, (ಪ್ರಲಯ ಕಾಲದಲ್ಲಿ) ಪರಿಮರಃ = ಮಾರಕ ಎಂದು ಉಪಾಸಿಸಬೇಕು. ಅಂತಹ ಉಪಾಸಕನ ಪರಿ = ಸುತ್ತಲೂ ಇರುವ, ದ್ವಿಷಂತಃ ಸಪತ್ನಾಃ = ಬಾಹ್ಯ ಶತ್ರುಗಳು ಮ್ರಿಯಂತೇ = ಸಾಯುತ್ತಾರೆ. ಯಾವ ಅಪ್ರಿಯರಾದ ಭ್ರಾತೃವ್ಯಾಃ = ದೇಹದೊಳಗಿನ ಕಾಮ-ಕ್ರೋಧಾದಿ ಶತ್ರುಗಳಿರುವರೋ ಅವರೂ ಸಾಯುತ್ತಾರೆ. ॥ ೯ ॥

**ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪ ಸಂಕ್ರಮ್ಯ । ಏತಂ ಪ್ರಾಣ ಮಯಮಾತ್ಮಾನಮುಪ ಸಂಕ್ರಮ್ಯ । ಏತಂ ಮನೋ ಮಯಮಾತ್ಮಾನಮುಪ ಸಂಕ್ರಮ್ಯ । ಏತಂ ವಿಜ್ಞಾನಮಯ ಮಾತ್ಮಾನಮುಪ ಸಂಕ್ರಮ್ಯ । ಏತಮಾನಂದಮಯಮಾತ್ಮಾನಮುಪ ಸಂಕ್ರಮ್ಯ । ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನು ಸಂಚರನ್ । ಏತತ್ ಸಾಮ ಗಾಯನ್ನಾಸ್ತೇ । ಹಾ೩ವು ಹಾ೩ವು**

**ಹಾ೩ವು । ಅಹಮನ್ನಮಹಮನ್ನ ಮಹಮನ್ನಮ್ । ಅಹ-ಮನ್ನಾದೋ೩ऽಹಮನ್ನಾದೋ೩ऽಹಮನ್ನಾದಃ । ಅಹ೪೨ ಶ್ಲೋಕಕೃದಹ೪೨ಶ್ಲೋಕಕೃದಹ೪ಶ್ಲೋಕಕೃತ್ ॥ ೧೦ ॥**

ಇದುವರೆಗೆ ಹೇಳಿರುವ ಆ ಬ್ರಹ್ಮನು ಸರ್ವಜೀವ ಸಮೂಹದೊಳಗೂ ಏನಿರುವನೋ ಹಾಗೂ ಸೂರ್ಯನೇ ಮೊದಲಾದ ದೇವತೆಗಳ ಒಳಗೂ ಇರುವನೋ ಅವನು ಒಬ್ಬನೇ ಆಗಿರುತ್ತಾನೆ.

ಅನ್ನ ಮಯಾದಿ ಭಗವದ್ರೂಪಗಳನ್ನು ತಿಳಿದ ಜ್ಞಾನಿಯು ಈ ದೇಹವನ್ನು ತ್ಯಜಿಸಿದ ಮೇಲೆ ಅನ್ನಮಯ ರೂಪದ ಬಳಿ ಹೋಗಿ, ಪ್ರಾಣಮಯನ ಬಳಿ ಹೋಗಿ ಮನೋಮಯನ ಬಳಿ ಹೋಗಿ, ವಿಜ್ಞಾನಮಯನ ಬಳಿಗೆ ಹೋಗಿ, ಆನಂದಮಯನ ಬಳಿಗೆ ಹೋಗಿ, ಬಯಸಿದ ರೂಪಗಳನ್ನು ಧರಿಸಿ, ಯಥೇಚ್ಛ ಭೋಗಗಳನ್ನು ಅನುಭವಿಸುತ್ತಾ ಮುಕ್ತ ಲೋಕಗಳಲ್ಲಿ ಸಂಚರಿಸುತ್ತಾ ಈ ಮುಂದಿನ ಸಾಮವನ್ನು (ಮಂತ್ರವನ್ನು) ಹಾಡುತ್ತಿರುತ್ತಾನೆ. ಸುಖೋದ್ರಿಕ್ತನಾಗಿ ಹಾ, ವು, ಮುಂತಾಗಿ ಹಾಡುತ್ತಾನೆ. ''ನಾನು ನನಗಿಂತ ಕೆಳಗಿನವರಿಗೆ ನಿಯಾಮಕನಾಗಿದ್ದೇನೆ. (ಅದ್ಯತ್ವೇನ ಅನ್ನಂ). ನಾನು ಯಥೇಷ್ಟ ಕಾಮಭೋಗಗಳನ್ನು ಅನುಭವಿಸುತ್ತಿದ್ದೇನೆ. ನಾನು ಶ್ರೀಹರಿಯ ಕೀರ್ತಿಯನ್ನು ಸಾರುತ್ತಿದ್ದೇನೆ'' ಎಂದು.

**ವ್ಯಾಖ್ಯಾತಮೇತದ್ ಬ್ರಹ್ಮವಲ್ಯಾಂ । ಅನ್ನಮಯಾದಿ ಭಗವದ್ರೂಪಜ್ಞಾನಿನಃ ತತ್ ಪ್ರಾಪ್ತಿರುಕ್ತಾ । ತಾಮನೂದ್ಯ ತದನಂತರ ಸ್ಥಿತಿಮಾಹ – ಸ ಯ ಏವಂ ವಿತ್ ಇತ್ಯಾದಿನಾ ॥**

'ಸ ಯಶ್ಚಾಯಂ ಪುರುಷೇ' ಎಂಬ ವಾಕ್ಯಗಳೆರಡನ್ನೂ ಹಿಂದಿನ ಬ್ರಹ್ಮವಲ್ಲಿಯಲ್ಲಿಯೇ ವ್ಯಾಖ್ಯಾನ ಮಾಡಲಾಗಿದೆ. ಹಿಂದಿನ ವಲ್ಲಿಯಲ್ಲಿ ಅನ್ನಮಯಾದಿ ರೂಪಗಳನ್ನು ಪ್ರತ್ಯಕ್ಷೀಕರಿಸಿಕೊಂಡ ಸಾಧಕರಿಗೆ ಆ ರೂಪಗಳ ಪ್ರಾಪ್ತಿಯನ್ನು ಹೇಳಲಾಗಿದೆ. ಅದನ್ನು ಮತ್ತೆ ಇಲ್ಲಿ 'ಅನ್ನಮಯಂ ಆತ್ಮಾನಂ ಉಪಸಂಕ್ರಮ್ಯ' ಎಂದು ಅನುವಾದ ಮಾಡಿ ಮುಂದೆ ಅವನು ಮಾಡುವ ಕೆಲಸವನ್ನು ಹೇಳಲಾಗಿದೆ.

**ಏವಂ ವಿತ್ = ಉಕ್ತರೀತ್ಯಾ ಅನ್ನಮಯಾದಿ ರೂಪಜ್ಞಾನೀ ವಿರಿಂಚಾದಿಃ, ಲೋಕಾತ್ = ದೇಹಾತ್, ಪ್ರೇತ್ಯ = ನಿರ್ಗತ್ಯ । ಪಂಚರೂಪ ಪ್ರಾಪ್ತಿಃ ಉಪಲಕ್ಷಣಮ್ । ವಾಙ್ಮಯಾದಿ ರೂಪತ್ರಯಪ್ರಾಪ್ತಿರಪಿ ಧ್ಯೇಯಾ ।**

ಏವಂ ವಿತ್ ಎಂದರೆ ಹಿಂದೆ ಹೇಳಿದಂತೆ ಅನ್ನಮಯಾದಿ ರೂಪಗಳನ್ನು ತಿಳಿದು ಅಪರೋಕ್ಷೀಕರಿಸಿಕೊಂಡ ಬ್ರಹ್ಮಾದಿ ದೇವತೆಗಳು ಲೋಕಾತ್ = ತಮ್ಮ ಚರಮ ದೇಹದಿಂದ, ಪ್ರೇತ್ಯ = ಹೊರಬಂದು (ದೇಹವನ್ನು ಬಿಟ್ಟು ಅನ್ನಮಯಾದಿ-ರೂಪಗಳನ್ನು ಹೊಂದುತ್ತಾರೆ).

ಇಲ್ಲಿ ಐದು ರೂಪಗಳ ಪ್ರಾಪ್ತಿಯನ್ನಷ್ಟೇ ಹೇಳಲಾಗಿದೆ. ಅದರ ಜೊತೆಗೆ ಹಿಂದೆ ಪ್ರಸ್ತುತವಾದ ವಾಙ್ಮಯ-ಚಕ್ಷುರ್ಮಯ-ಶ್ರೋತ್ರಮಯ ರೂಪಗಳ ಪ್ರಾಪ್ತಿಯನ್ನೂ ತಿಳಿದುಕೊಳ್ಳಬೇಕು.

**ಕಾಮಾನ್ನೀ = ಕಾಮ ಭೋಗವಾನ್, ಕಾಮರೂಪೀ = ಇಚ್ಛಾಧೀನ-ರೂಪವಾನ್, ಇಮಾನ್ ಲೋಕಾನ್ ಅನುಸಂಚರನ್, ಏತತ್ = ವಕ್ಷ್ಯಮಾಣಂ ಸಾಮ ಗಾಯನ್, ಆಸ್ತೇ = ವರ್ತತೇ ।**

ಬ್ರಹ್ಮಾದಿ ದೇವತೆಗಳು, ಕಾಮಾನ್ನೀ = ಯಥೇಷ್ಟ ಭೋಗವನ್ನು ಅನುಭವಿಸುತ್ತಾ, ಕಾಮರೂಪೀ = ಬಯಸಿದ ರೂಪಗಳನ್ನು ಧರಿಸುತ್ತಾ ಈ ಮುಕ್ತ ಲೋಕಗಳಲ್ಲಿ ಸಂಚರಿಸುತ್ತಾ, ಏತತ್ = ಮುಂದೆ ಹೇಳುವ ಸಾಮವನ್ನು ಹಾಡುತ್ತಾ ಆಸ್ತೇ = ಇರುತ್ತಾರೆ.

**ಕಿಂ ತತ್ ಸಾಮ ಇತ್ಯತ ಆಹ - ಹಾ ವು ಇತ್ಯಾದಿನಾ ॥ ಭೋಗ್ಯತ್ವಹೇತುನಾ ಅಹಂ ಅನ್ನಮ್ । ಅಹಂ ಅನ್ನಾದಃ = ಯಥೇಷ್ಟಭೋಕ್ತಾ । ಶ್ಲೋಕಕೃತ್ = ಹರೇಃ ಕೀರ್ತಿ ಪ್ರಕಾಶಕೃತ್ । 'ಹಾ ವು' ಇತ್ಯಾದೌ ತ್ರಿಸ್ತ್ರಿರುಕ್ತಿಃ ಸಾಮತ್ವಾತ್ । ಸುಖಾತಿಶಯ ಆಸ್ವಾದನಾದ್ವಾ ಇತಿ ಧ್ಯೇಯಮ್ ॥ ೧೦ ॥**

ಮುಕ್ತರು ಹಾಡುವ ಸಾಮವನ್ನು 'ಹಾ ವು' ಎಂದು ಮುಂತಾಗಿ ಉಪನಿಷತ್ತು ಹೇಳಿದೆ.

''ಇತರರಿಗೆ ಭೋಗ್ಯನಾದುದರಿಂದ ನಾನು ಅನ್ನ. (ಮೋಕ್ಷದಲ್ಲು ಉತ್ತಮರು ತಮಗಿಂತ ಕೆಳಗಿನವರಿಗೆ ನಿಯಾಮಕರಾಗಿ ಸುಖಪ್ರದರಾಗಿರುತ್ತಾರೆ. ಆದ್ದರಿಂದ ಉತ್ತಮರು ಕೆಳಗಿನವರಿಗೆ ಅನ್ನರು) ನಾನು ಅನ್ನಾದ ಎಂದರೆ

ಯಥೇಷ್ಟಕಾಮವನ್ನು ಅನುಭವಿಸುತ್ತಿದ್ದೇನೆ, ಶ್ಲೋಕಕೃತ್ = ಶ್ರೀ ಹರಿಯ ಯಶಸ್ಸನ್ನು ಪ್ರಚುರಪಡಿಸುತ್ತಿದ್ದೇನೆ.

'ಹಾ ವು' ಎನ್ನುವುದು ಗಾನಕ್ಕಾಗಿ ಉಪಯೋಗಿಸಲಾದ ಅಕ್ಷರಗಳು. ಅಂತಹವನ್ನು ಸಾಮಗಾನದಲ್ಲಿ ಬೇಕಾದಷ್ಟು ಬಾರಿ ಬಳಸಬಹುದು. ಅಥವಾ ಮುಕ್ತರಿಗೆ ಸುಖೋದ್ರೇಕವಿದೆ ಎಂದು ಸೂಚಿಸಲು ಮೂರು ಬಾರಿ ಹೇಳಲಾಗಿದೆ. ॥ ೧೦ ॥

**ಅಹಮಸ್ಮಿ ಪ್ರಥಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋಽಮೃತಸ್ಯ ನಾ೩ ಭಾ೩ಇ । ಯೋ ಮಾ ದದಾತಿ ಸ ಇದೇವ ಮಾ೩ ವಾಃ । ಅಹಮನ್ನಮನ್ನಮದಂತಮಾ೩ ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಮ್ । ಸುವರ್ಣಜ್ಯೋತೀಃ ॥ ಯ ಏವಂ ವೇದ । ಇತ್ಯುಪನಿಷತ್ ॥ ೧೧ ॥**

''ನಾನು (ಬ್ರಹ್ಮ) ದೇವತೆಗಳಿಗಿಂತಲೂ ಮೊದಲು ವಿಷ್ಣುವಿನಿಂದ ಹುಟ್ಟಿದ ಜ್ಯೇಷ್ಠ ಪುತ್ರ. ನಾನು ಮುಕ್ತರಿಗೆಲ್ಲ ಆಶ್ರಯ. ಯಾರು ವಿಷ್ಣುವಿನ ಮಹಿಮೆಯನ್ನು ಸಾರುವ ಪ್ರಮಾಣಗಳನ್ನು ಭಕ್ತರಿಗೆ ಉಪದೇಶಿಸುವರೋ ಅವರು ಜೀವನ್ಮುಕ್ತರಾಗಿ ನನ್ನ ಬಳಿ ಬರುತ್ತಾರೆ. (ಪ್ರತೀಕಾಲಂಬನರಾದ ಸಾಧಕರು ಪ್ರಾರಬ್ಧಕರ್ಮವನ್ನು ಅನುಭವಿಸಿ ಚರಮ ದೇಹವನ್ನು ಬಿಟ್ಟು ಅರ್ಚಿರಾದಿ ಮಾರ್ಗಗಳ ಮೂಲಕ ಬ್ರಹ್ಮದೇವರ ಬಳಿ ಬರುತ್ತಾರೆ) ನಾನು ಪರಮಾತ್ಮನಿಗೆ ಅನ್ನದಂತೆ ಭೋಗ್ಯ-ವಸ್ತುವಾಗಿದ್ದೇನೆ. ನಾನು ಅನ್ನವನ್ನು ತಿನ್ನುವ ಜೀವರಿಗೆ ಸಂಹಾಕರನಾಗಿದ್ದೇನೆ. (ಜೀವರು ಬ್ರಹ್ಮದೇವರಿಗೆ ಅನ್ನದಂತೆ) ನಾನು ಸಕಲ ಲೋಕಗಳನ್ನು ಗುಣಗಳಿಂದ ಮೀರಿನಿಂತಿದ್ದೇನೆ. ಎಲ್ಲರಿಗಿಂತಲೂ ಶ್ರೇಷ್ಠನಾಗಿರುವೆನು, ಎಂದರ್ಥ. ಆದರೂ ಸ್ವರ್ಣಕಾಂತಿಯ ಶ್ರೀಹರಿಯೇ ನನಗೆ ಪ್ರೇರಕನಾಗಿರುವನು. ಹೀಗೆ ತಿಳಿದಿರುವ ಚತುರ್ಮುಖನೇ ಮುಖ್ಯವಾಗಿ ಜ್ಞಾನಿ ಎನಿಸಿದ್ದಾನೆ.

ಹೀಗೆ ನಾನು (ವರುಣನು) ನಿನಗೆ (ಭೃಗುವಿಗೆ) ರಹಸ್ಯ-ವಿದ್ಯೆಯನ್ನು ಹೇಳಿದ್ದೇನೆ.

**ಋತಸ್ಯ ಜ್ಞಾನರೂಪಸ್ಯ ವಿಷ್ಣೋಃ ಪ್ರಥಮಜಃ ಅಹಂ ಅಸ್ಮಿ । ಕಿಂ ಮನುಷ್ಯೇಭ್ಯಃ ಪೂರ್ವಂ ಜಾತಃ ಇತ್ಯತ ಆಹ - ಪೂರ್ವಮಿತಿ ॥ ದೇವೇಭ್ಯೋ ಪೂರ್ವಂ ಜಾತೋಽಸ್ಮಿ ಇತ್ಯಾಹ, ಮುಖ್ಯೋಽಧಿಕಾರೀ ವಿರಿಂಚಃ ।**

**ಅಮೃತಸ್ಯ = ಮುಕ್ತವರ್ಗಸ್ಯ, ನಾಭಿಃ = ಆಶ್ರಯಃ । ಯಃ ಅಧಿಕಾರೀ, ಮಾಃ - ಪ್ರಮಾಃ = ವಿಷ್ಣುಮಹಿಮಾ ಪ್ರತಿಪಾದಕ ಪ್ರಮಾಣಾನಿ, ದದಾತಿ = ಭಕ್ತೇಭ್ಯಃ ಉಪದಿಶತಿ ಸಃ, ಇದೇವ = ಇತ್ಥಮೇವ ಜೀವನ್ಮುಕ್ತದಶಾಯಾಂ, ಮಾ = ಮಾಂ, ಅವಾಃ = ಆಗಚ್ಛತಿ । ''ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ'' (೪-೩-೭) ಇತಿ ಸೂತ್ರಾತ್ । ''ವಾ-ಗತಿಗಂಧನಯೋಃ' ಇತ್ಯಸ್ಯ ಇದಂ ರೂಪಂ 'ಅವಾಃ' ಇತಿ ।**

ಉಪನಿಷತ್ತಿನಲ್ಲಿ ಋತಸ್ಯ ಎಂದರೆ ಜ್ಞಾನರೂಪನಾದ ವಿಷ್ಣುವಿನ, ಮೊದಲ ಮಗನಾಗಿದ್ದೇನೆ ಎಂದರ್ಥ. ಮೊದಲ ಎಂದರೆ ಯಾರಿಗಿಂತ ಮೊದಲ ಮಗ? ಮನುಷ್ಯರಿಗಿಂತಲೂ ಮೊದಲು ಹುಟ್ಟಿದವನೋ, ದೇವತೆಗಳಿಗಿಂತಲೋ? ಅದಕ್ಕೆ ಉತ್ತರ - ''ಪೂರ್ವಂ ದೇವೇಭ್ಯಃ''. ನಾನು ದೇವತೆಗಳಿಗಿಂತ ಮೊದಲು ಹುಟ್ಟಿದವನು ಎಂದಿದ್ದಾನೆ ಈ ಬ್ರಹ್ಮವಿದ್ಯೆಗೆ ಮುಖ್ಯಾಧಿಕಾರಿಯಾದ ಚತುರ್ಮುಖ.

ನಾನು, ಅಮೃತಸ್ಯ = ಮುಕ್ತ ಸಮೂಹಕ್ಕೆ, ನಾಭಿಃ = ಆಶ್ರಯನಾಗಿದ್ದೇನೆ. ಅರ್ಹನಾದ ಸಾಧಕನೊಬ್ಬನು 'ಮಾಃ' ಇದನ್ನು ಪ್ರಮಾಃ ಎಂದು ಇಟ್ಟುಕೊಳ್ಳಬೇಕು - ವಿಷ್ಣುವಿನ ಮಹಿಮೆಯನ್ನು ಸಾರುವ ಪ್ರಮಾಣಗಳನ್ನು, ದದಾತಿ = ಭಕ್ತರಿಗೆ ಉಪದೇಶ ಮಾಡುವನೋ ಇದೇವ = ಇದೇರಿತಿ, ಅಂದರೆ ಜೀವನ್ಮುಕ್ತಿ - ಅವಸ್ಥೆಯಲ್ಲಿ ಮಾ = ನನ್ನನ್ನು, ಅವಾಃ = ಸಮೀಪಿಸುತ್ತಾನೆ.

''ಕಾರ್ಯಂ ಬಾದರಿಃ ಅಸ್ಯ ಗತ್ಯುಪಪತ್ತೇಃ'' (೪-೩-೭) ಎಂಬ ಬ್ರಹ್ಮಸೂತ್ರದಲ್ಲಿ ''ವಾಯುದೇವರು ಮುಕ್ತಿಯೋಗ್ಯರನ್ನು ಕಾರ್ಯಬ್ರಹ್ಮನ ಬಳಿಗೆ - ಚತುರ್ಮುಖ ಬ್ರಹ್ಮನೆಡೆಗೆ ಕೆರದುಕೊಂಡು ಹೋಗುತ್ತಾರೆ'' ಎಂದು ಹೇಳಲಾಗಿದೆ.

ಚಲನೆ ಎಂಬ ಅರ್ಥದ 'ವಾ' ಧಾತುವಿನಿಂದ 'ಅವಾಃ' ಎಂದು ರೂಪವಾಗಿದೆ.

**ಅಹಂ ಅನ್ನಂ, ಹರೇರಿತಿ ಯೋಜ್ಯಮ್ । ಮುಕ್ತಸ್ಯ ಅವರೋಪ ಜೀವ್ಯತ್ವಾದ್ವಾ । ಅದಂತಂ ಜೀವಜಾತಂ ಅಹಂ ಅದ್ಮಿ । ಮಮ ಅನ್ನಂ ಸರ್ವಜೀವಾಃ ಇತ್ಯರ್ಥಃ ।**

**ಅಹಂ, ವಿಶ್ವಂ ಭುವನಂ = ಸರ್ವಂ ಜಗತ್, ಸರ್ವೈ ಗುಣೈಃ, ಅಭ್ಯಭವಮ್ = ಅಭಿಭೂತವಾನಸ್ಮಿ । ಶ್ರೇಷ್ಠೋಽಸ್ಮಿ ಇತ್ಯರ್ಥಃ ।**

**ತರ್ಹಿ ಕಿಂ ಸ್ವತಂತ್ರಃ? ನೇತ್ಯಾಹ – 'ಸುವರ್ಣಜ್ಯೋತಿಃ' ಇತಿ । ಸು-ವರ್ಣಃ = ಶೋಭನ – ಉತ್ತಮ – ಆನಂದರೂಪಃ ಸ್ವರ್ಣಕಾಂತಿಶ್ಚ ಹರಿಃ, ಜ್ಯೋತಿಃ ಪ್ರೇರಕಃ ಅಸ್ಯೇತಿ ತಥೋಕ್ತಃ ॥**

'ನಾನು ಅನ್ನ' ಹರಿಗೆ ಎಂಬಂಶವನ್ನು ಸೇರಿಸಿಕೊಳ್ಳಬೇಕು. ಅಥವಾ, ಚತುರ್ಮುಖನು ತನಗಿಂತ ಕೆಳಗಿನವರಿಗೆ ಅನ್ನ. ಅವರು ಅವನನ್ನು ಅವಲಂಬಿಸಿರುವುದರಿಂದಾಗಿ. ಉಣ್ಣುವ ಜೀವವರ್ಗವನ್ನು ನಾನು ಉಣ್ಣುತ್ತೇನೆ. ನನಗೆ ಜೀವರಾಶಿಯು ಅನ್ನದಂತೆ ಎಂದು ಭಾವ.

ನಾನು, ವಿಶ್ವಂ ಭುವನಂ = ಸಕಲ ಜಗತ್ತನ್ನೂ ಗುಣಗಳಿಂದ ಅಭ್ಯಭವಂ = ಮೀರಿದ್ದೇನೆ. ಎಲ್ಲರಿಗಿಂತಲೂ ನಾನು ಶ್ರೇಷ್ಠನಾಗಿದ್ದೇನೆ ಎಂದರ್ಥ.

ಹಾಗಾದರೆ ನೀನೇ ಸ್ವತಂತ್ರನೇ? ಹಾಗಿಲ್ಲ ಎನ್ನುತ್ತಾನೆ ಚತುರ್ಮುಖ – ''ಸುವರ್ಣ ಜ್ಯೋತಿಃ'' । ಸು = ದುಃಖವಿಲ್ಲದ, ಉತ್ತಮವಾದ ವರ್ಣ = ಆನಂದರೂಪನಾದ ಹಾಗೂ ಬಂಗಾರದ ಮೈ ಬಣ್ಣದ ಶ್ರೀ ಹರಿಯು ನನಗೆ ಜ್ಯೋತಿಃ = ಪ್ರೇರಕನು.

**ಯ ಏವಂ, ವೇದ = ಸಮ್ಯಕ್ ಜಾನಾತಿ ವಿರಿಂಚಃ, ಸ ಏವ ಮುಖ್ಯಜ್ಞಾನೀ ।**

**ಏವಂ ಸಾಮಗಾಯನ್ನಾಸ್ತೇ ಇತಿ ಪೂರ್ವೇಣ ಅನ್ವಯಃ । ಯದ್ವಾ 'ವೇದ' ಇತಿ ಉತ್ತಮ ಪುರುಷ ಏಕವಚನಂ । ''ಯೋಽಹಂ ಏವಂ ವೇದ ಸೋಽಹಂ ಸುವರ್ಣಜ್ಯೋತಿಃ'' ಇತಿ ಯೋಜನಾ ।**

**ಇತಿ = ಏವಂ ಪ್ರಕಾರೇಣ, ಉಪನಿಷತ್ = ರಹಸ್ಯಂ ಉಕ್ತಮ್ ಇತಿ ಉಪಸಂಹಾರಃ ।**

ಯಾರು, ಏವಂ ವೇದ = ತಾನು ಪರಮಾತ್ಮನ ಅಧೀನ ಎಂದು ದೃಢವಾಗಿ ತಿಳಿದಿರುವನೋ ಅಂತಹ ಚತುರ್ಮುಖನೇ ಮುಖ್ಯವಾದ ಬ್ರಹ್ಮಜ್ಞಾನಿ.

'ಇತ್ಯುಪನಿಷತ್' ಎಂಬಲ್ಲಿರುವ ಇತಿ ಶಬ್ದವನ್ನು 'ಸಾಮಗಾಯನ್ನಾಸ್ತೇ' ಎಂದು ಆರಂಭದಲ್ಲಿರುವ ಸಾಮ ಶಬ್ದದೊಂದಿಗೆ ಸೇರಿಸಿಕೊಂಡು ''ಇತಿ ಸಾಮಗಾಯನ್ ಆಸ್ತೆ'' ಎಂದು ವಾಕ್ಯವನ್ನು ಪೂರ್ಣಗೊಳಿಸಬೇಕು.

ಅಥವಾ 'ವೇದ' ಎಂಬ ಕ್ರಿಯಾಪದ ಪ್ರಥಮ ಪುರುಷವಲ್ಲ. ಉತ್ತಮ ಪುರುಷದ ಏಕವಚನವೆಂದಾದರೂ ಪರಿಗಣಿಸಬಹುದು. ಆಗ ಬ್ರಹ್ಮ ಹೇಳುವ ಮಾತು - ''ಯಾವ ನಾನು ಜೀವೋತ್ತಮನೆಂದು ತಿಳಿದಿರುವೆನೋ ಅಂತಹ ನನಗೆ ಪರಮಾತ್ಮನು ಪ್ರೇರಕನಾಗಿದ್ದಾನೆ'' ಎಂದು.

ಇತ್ಯುಪನಿಷತ್ - ಇತಿ ಈ ರೀತಿ ಯಾವ ಉಪನಿಷತ್ = ರಸಹ್ಯವು ಹೇಳಲ್ಪಟ್ಟಿದೆ ಎಂದು ಕೊನೆಯಲ್ಲಿ ವರುಣನು ಭೃಗುವಿಗೆ ಹೇಳಿದ್ದಾನೆ.

ಶಾಂತಿಮಂತ್ರ

**ಓಂ॥ ಸಹ ನಾವವತು । ಸಹ ನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ।**

**ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಇತಿ ತೃತೀಯವಲ್ಲೀ ಸಂಪೂರ್ಣಾ ॥

ತೈತ್ತಿರೀಯೋಪನಿಷದಃ ಭಾಷ್ಯಾದ್ಯುಕ್ತಾರ್ಥ ಸಂಗ್ರಹಃ ।
ರಾಘವೇಂದ್ರೇಣ ಯತಿನಾ ಕೃತಃ ಸಜ್ಜನ ಸಂವಿದೇ ॥

ಇತಿ ಶ್ರೀ ರಾಘವೇಂದ್ರಯತಿ ವಿರಚಿತಃ
ಶ್ರೀತೈತ್ತಿರೀಯೋಪನಿಷತ್ ಖಂಡಾರ್ಥಃ ಸಂಪೂರ್ಣಃ ॥

ತೈತ್ತಿರೀಯ ಉಪನಿಷತ್ತಿಗೆ ಭಾಷ್ಯ-ಟೀಕೆಗಳಲ್ಲಿ ಹೇಳಿರುವ ಅರ್ಥವನ್ನು ಶ್ರೀರಾಘವೇಂದ್ರ ಯತಿಗಳು ಸಜ್ಜನರ ಜ್ಞಾನಕ್ಕಾಗಿ ಸಂಗ್ರಹಿಸಿ ಹೇಳಿದ್ದಾರೆ.

ಇಲ್ಲಿಗೆ ತೈತ್ತಿರೀಯೋಪನಿಷತ್ತಿನ ಖಂಡಾರ್ಥ ಮುಗಿಯಿತು.

